KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೫ || ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೩೦, ೨೦೧೦ (ಆಶ್ವಯುಜ ೮, ಶಕ ವರ್ಷ ೧೯೩೨) || ಸಂಚಿಕೆ ೩೯

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ನೇಮಕವಾಗುವ ಒಂಬುಡ್ಸ್‌ಮನ್‌ರವರಿಗೆ ಕಛೇರಿ ವ್ಯವಸ್ಥೆಯನ್ನು ಕಲ್ಪಿಸುವ ಕುರಿತು.

**ಓದಲಾಗಿದೆ :** 1. ಕೇಂದ್ರ ಸರ್ಕಾರದ ಆದೇಶ ಸಂ. ಜೆ. 11011/21/2008–ಎನ್‌ಆರ್‌ಇಜಿಎ ದಿನಾಂಕ 07–09–2009

2. ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿರವರ ಆಧ್ಯಕ್ಷತೆಯಲ್ಲಿ ನಡೆದ ಆಯ್ಕೆ ಸಮಿತಿಯ ಸಭೆಯ ನಡವಳಿಗಳು ದಿನಾಂಕ : 22–05–2010

**ಪ್ರಸ್ತಾವನೆ :**

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಅಧಿನಿಯಮ 2005ರ ಪ್ರಕರಣ 27ರ ಉಪ ಪ್ರಕರಣ 1 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸರ್ಕಾರವು ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಸ್ವೀಕರಿಸಲಾಗುವ ದೂರುಗಳನ್ನು ವಿಲೇ ಮಾಡಿ ಪರಿಹರಿಸಲು ಒಂಬುಡ್ಸ್‌ಮನ್‌ಗಳನ್ನು ನೇಮಿಸುವ ಕುರಿತು ಮೇಲೆ ಓದಲಾದ ಕ್ರಮ ಸಂ.1 ರಂತೆ ಆದೇಶವನ್ನು ಹೊರಡಿಸಿದೆ. ಅಲ್ಲದೇ ಈ ಪ್ರಕ್ರಿಯೆಗಾಗಿ ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯನ್ನು ರಚಿಸಲಾಗಿರುತ್ತದೆ. ಅದರಂತೆ ರಾಜ್ಯದಲ್ಲಿ ಒಂಬುಡ್ಸ್‌ಮನ್‌ಗಳ ನೇಮಕ ಪ್ರಕ್ರಿಯೆಯು ಮೇಲೆ ಓದಲಾದ ಕ್ರಮ ಸಂ. 2 ರಂತೆ ನೇಮಕವಾಗುವ ಒಂಬುಡ್ಸ್‌ಮನ್‌ಗಳಿಗೆ ಜಿಲ್ಲಾ ಕೇಂದ್ರ ಸ್ಥಾನದಲ್ಲಿ ಕಾರ್ಯನಿರ್ವಹಿಸಲು ಅವಶ್ಯ ವ್ಯವಸ್ಥೆಯನ್ನು ಕಲ್ಪಿಸಬೇಕಾಗಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 213 ಮಗಾಂಉಖಾಯೊ 2009 ಬೆಂಗಳೂರು, ದಿನಾಂಕ : 26ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ನೇಮಕವಾಗುವ ಒಂಬುಡ್ಸ್‌ಮನ್‌ಗಳ ಕರ್ತವ್ಯ ನಿರ್ವಹಣೆಗಾಗಿ ಜಿಲ್ಲಾ ಪಂಚಾಯಿತಿಯು ಈ ಕೆಳಕಂಡಂತೆ ವ್ಯವಸ್ಥೆಗಳನ್ನು ಕಲ್ಪಿಸಲು ಆದೇಶಿಸಿದೆ.

1. ಅಧಿಕೃತಗೊಳಿಸಿದ ಕೆಲಸ ಕಾರ್ಯ ನಿರ್ವಹಿಸಲು ಅನುವಾಗುವಂತೆ ಸ್ಥಳಾವಕಾಶವನ್ನು ಜಿಲ್ಲಾ ಪಂಚಾಯತ್ ಕಛೇರಿಯಲ್ಲಿ ನೀಡುವುದು.
2. ಮೇಲೆ ಓದಲಾದ ಕೇಂದ್ರ ಸರ್ಕಾರದ ಪತ್ರದ ಕ್ರಮ ಸಂಖ್ಯೆ 7 ರಲ್ಲಿ ತಿಳಿಸಿರುವಂತೆ ಸೂಕ್ತ ತಾಂತ್ರಿಕ ಮತ್ತು ಆಡಳಿತಾತ್ಮಕ ನೆರವು ನೀಡುವುದು (ಪ್ರತಿ ಲಗತ್ತಿಸಿದೆ)
3. ಕಛೇರಿ ವ್ಯವಸ್ಥೆಯನ್ನು ಕಲ್ಪಿಸಲು ಹಾಗೂ ನಿರ್ವಹಣೆಗಾಗಿ ತಗಲುವ ಇತರ ಎಲ್ಲಾ ವೆಚ್ಚಗಳನ್ನು ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಶೇಕಡಾ 6ರ ಆಡಳಿತಾತ್ಮಕ ವೆಚ್ಚದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಎಸ್. ಪ್ರಸನ್ನಕುಮಾರ್**
ನಿರ್ದೇಶಕರು,
ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ
ಖಾತರಿ ಯೋಜನೆ ಹಾಗೂ ಪದ ನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1749

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ :** ರಾಜ್ಯದಲ್ಲಿ ಮಾದರಿ ಸಾರ್ವಜನಿಕ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸುವ ಬಗ್ಗೆ.

**ಪ್ರಸ್ತಾವನೆ :**

2010-11ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 207 ಈ ಕೆಳಗಿನಂತಿದೆ :-

ಪರಿಶಿಷ್ಟ ಜಾತಿಗಳು, ಪರಿಶಿಷ್ಟ ವರ್ಗಗಳು, ಹಿಂದುಳಿದ ವರ್ಗಗಳು, ಮತ್ತು ಅಲ್ಪಸಂಖ್ಯಾತರಿಗಾಗಿ ಪ್ರತ್ಯೇಕ ವಿದ್ಯಾರ್ಥಿನಿಲಯಗಳನ್ನು ಈಗ ನಡೆಸಲಾಗುತ್ತಿದ್ದು ಈ ವಿದ್ಯಾರ್ಥಿನಿಲಯಗಳಲ್ಲಿ ಸೀಮಿತ ಸಂಖ್ಯೆಯಲ್ಲಿ ಇತರ ವರ್ಗಗಳಿಗೆ ಪ್ರವೇಶ ನೀಡಲಾಗುತ್ತಿದೆ. ಈ ವ್ಯವಸ್ಥೆಯನ್ನು ಜಿಲ್ಲಾ ಮಟ್ಟದಲ್ಲಿ ಇನ್ನಷ್ಟು ವಿಸ್ತರಿಸಿ ಎಲ್ಲ ವರ್ಗಗಳಿಗೆ ನಿಗದಿತ ಪ್ರವೇಶಾವಕಾಶವಿರುವ ಮಾದರಿ ಸಾರ್ವಜನಿಕ ವಿದ್ಯಾರ್ಥಿನಿಲಯಗಳನ್ನು 10 ಜಿಲ್ಲೆಗಳಲ್ಲಿ ತೆರೆಯಲು ರೂ. 20.00 ಕೋಟಿ ವಿನಿಯೋಗಿಸಲಾಗುವುದು. ಇದರಿಂದ ವಿದ್ಯಾರ್ಥಿ ದೆಸೆಯಿಂದಲೂ ರಾಜ್ಯದ ಯುವಕ ಯುವತಿಯರಲ್ಲಿ ಸೋದರತ್ವ ಮತ್ತು ಸಮಾನತೆಯ ಭಾವನೆಯನ್ನು ಬೆಳೆಸಲು ಸಹಾಯವಾಗುವುದು.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ

**ಸರ್ಕಾರಿ ಆದೇಶ ಸಂಖ್ಯೆ : ಸಕಇ 133 ಪಕವಿ 2010, ಬೆಂಗಳೂರು, ದಿನಾಂಕ : 29ನೇ ಜೂನ್, 2010**

2010-11ನೇ ಸಾಲಿನಲ್ಲಿ ಕೋಲಾರ, ಚಿತ್ರದುರ್ಗ, ಗದಗ, ಕೊಪ್ಪಳ, ರಾಯಚೂರು, ಬಿಜಾಪುರ ಈ ಸ್ಥಳಗಳಲ್ಲಿ ಒಂದೊಂದು ಬಾಲಕರ ಮೆಟ್ರಿಕ್ ನಂತರದ ಮಾದರಿ ವಿದ್ಯಾರ್ಥಿನಿಲಯ ಹಾಗೂ ಚಿಕ್ಕಬಳ್ಳಾಪುರ, ಚಾಮರಾಜನಗರ, ಬಾಗಲಕೋಟೆ, ಯಾದಗಿರಿ ಇಲ್ಲಿ ಒಂದೊಂದು ಬಾಲಕಿಯರ ಮೆಟ್ರಿಕ್ ನಂತರದ ಮಾದರಿ ವಿದ್ಯಾರ್ಥಿನಿಲಯ ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

(1) ಪ್ರತಿ ಮಾದರಿ ವಿದ್ಯಾರ್ಥಿನಿಲಯದಲ್ಲಿ ಈ ಕೆಳಗಿನಂತೆ ಹುದ್ದೆಗಳನ್ನು ಸೃಜಿಸಲು ಆದೇಶಿಸಿದೆ :-

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| (1) | ವಾರ್ಡನ್ | 01 |
| (2) | ಅಡುಗೆಯವರು | 02 |
| (3) | ಅಡುಗೆ ಸಹಾಯಕರು | 02 |
| (4) | ರಾತ್ರಿ ಕಾವಲುಗಾರರು (ವಿದ್ಯಾರ್ಥಿನಿಯರ ವಿದ್ಯಾರ್ಥಿ ನಿಲಯಗಳಿಗೆ (ಮಾತ್ರ) | 01 |
| | ಒಟ್ಟು | 06 |

ಆ ಪ್ರಕಾರ ಒಟ್ಟು 10 ವಾರ್ಡನ್, 20 ಅಡುಗೆಯವರು, 20 ಅಡಿಗೆ ಸಹಾಯಕರು ಮತ್ತು 4 ರಾತ್ರಿ ಕಾವಲುಗಾರರ ಹುದ್ದೆಗಳನ್ನು ಸೃಜಿಸಲಾಗಿದೆ.

(2) ಗ್ರೂಪ್-ಡಿ ಹುದ್ದೆಗಳನ್ನು ಹೊರ ಗುತ್ತಿಗೆ ಆಧಾರದ ಮೇಲೆ ತುಂಬಬಹುದು.

(3) ಪ್ರತಿ ವಿದ್ಯಾರ್ಥಿನಿಲಯದ ನಿಲಯಾರ್ಥಿಗಳ ಸಂಖ್ಯಾಬಲ 100 ಆಗಿದ್ದು ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶ ನೀಡುವುದು.

(4) ಅಂತಹ ವಿದ್ಯಾರ್ಥಿನಿಲಯಗಳಲ್ಲಿ ವಿವಿಧ ವರ್ಗಗಳ ವಿದ್ಯಾರ್ಥಿಗಳಿಗೆ ಪ್ರವೇಶ ನೀಡುವಲ್ಲಿ ಈ ಕೆಳಗಿನ ಅನುಪಾತ ಅನುಸರಿಸುವುದು.

- ಹಿಂದುಳಿದ ವರ್ಗ – 50%
- ಅಲ್ಪಸಂಖ್ಯಾತರು – 10%
- ಪರಿಶಿಷ್ಟ ಜಾತಿ – 20%
- ಪರಿಶಿಷ್ಟ ವರ್ಗ – 10%
- ಸಾಮಾನ್ಯ ವರ್ಗ – 10%

(5) ಮಾದರಿ ವಿದ್ಯಾರ್ಥಿ ನಿಲಯಗಳ ಮೇಲ್ವಿಚಾರಣೆಗೆ ಜಿಲ್ಲಾ ಮಟ್ಟದಲ್ಲಿ ಈ ಕೆಳಗಿನಂತೆ ಸಮಿತಿ ರಚಿಸಲಾಗಿದೆ :-

- ಜಿಲ್ಲಾಧಿಕಾರಿ – ಅಧಕ್ಷರು
- ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ – ಉಪಾಧ್ಯಕ್ಷರು
- ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ – ಸದಸ್ಯರು
- ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿ – ಸದಸ್ಯರು
- ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ – ಸದಸ್ಯ ಕಾರ್ಯದರ್ಶಿ

ಸದರಿ ಸಮಿತಿಯು ಈ ಮೇಲೆ ನಮೂದಿಸಿರುವ ಅನುಪಾತದಲ್ಲಿ ವಿದ್ಯಾರ್ಥಿಗಳನ್ನು ಮೆರಿಟ್ ಆಧಾರದ ಮೇಲೆ ಆಯ್ಕೆ ಮಾಡುವುದರ ಜೊತೆಗೆ ವಿದ್ಯಾರ್ಥಿನಿಲಯಗಳ ಉಸ್ತುವಾರಿ ನೋಡಿಕೊಳ್ಳುವ ಜವಾಬ್ದಾರಿ ಹೊಂದಿರುತ್ತದೆ. ಇದಕ್ಕೆ ಬೇಕಾಗುವ ಕಟ್ಟಡಗಳನ್ನು ಬಾಡಿಗೆ ಆಧಾರದ ಮೇಲೆ ಪಡೆದು ವಿದ್ಯಾರ್ಥಿನಿಲಯಗಳನ್ನು ಕೂಡಲೇ ಪ್ರಾರಂಭಿಸಿ ನಂತರ ಸೂಕ್ತ ನಿವೇಶನ ಪಡೆದು ಸ್ವಂತ ಕಟ್ಟಡ ನಿರ್ಮಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

(6) ಈ ಸಂಬಂಧದ ವೆಚ್ಚವನ್ನು 2010-11ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2225-03-800-0-19 (ಯೋಜನೆ)ರ ಅಡಿ ಒದಗಿಸಿರುವ ರೂ. 2000.00 ಲಕ್ಷಗಳ ಮೊತ್ತದ ಅನುದಾನದಲ್ಲಿ ಭರಿಸುವುದು.

(7) ಇದಕ್ಕೆ ಯೋಜನೆ ಇಲಾಖೆ ಹಾಗೂ ಆರ್ಥಿಕ ಇಲಾಖೆ ಇವುಗಳ ಸಹಮತಿಯನ್ನು ಕ್ರಮವಾಗಿ ಟಿಪ್ಪಣಿ ಸಂಖ್ಯೆ : ಪಿಡಿ 7 ಐಎಂಎಂ 2010, ದಿನಾಂಕ : 19-04-2010 ಮತ್ತು ಎಫ್‌ಡಿ 253 ವೆಚ್ಚ 3/10, ದಿನಾಂಕ : 28-04-2010ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಎಂ. ಚಿದಾನಂದ ಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ-1

ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1750

**ಶಿಕ್ಷಣ ಸಚಿವಾಲಯ**

**ವಿಷಯ :** ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ, ಬಳ್ಳಾರಿ (ಪಶ್ಚಿಮ) ವನ್ನು ಕುರುಗೋಡು ಗ್ರಾಮಕ್ಕೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ :** ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗ ಇವರ ಪತ್ರ ಸಂಖ್ಯೆ : ಯೋ 02, ಬಜಿಹೊ.ಶೈ.ಬ್ಲಾಕ್ : 15:2009-10

**ಪ್ರಸ್ತಾವನೆ :**

1. ಮೇಲೆ ಓದಲಾದ ಪತ್ರದಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಇವರು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಬಳ್ಳಾರಿ (ಪಶ್ಚಿಮ) ಈ ಕಛೇರಿಯನ್ನು ಬಳ್ಳಾರಿ ತಾಲ್ಲೂಕಿನ ಕುರುಗೋಡು ಗ್ರಾಮಕ್ಕೆ ಸ್ಥಳಾಂತರಿಸುವ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.
2. ಸದರಿ ಪ್ರಸ್ತಾವನೆ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 309 ಯೋಸಕ 2009 ಬೆಂಗಳೂರು, ದಿನಾಂಕ : 22ನೇ ಜೂನ್, 2010**

**[ಇಡಿ : 76 : ಸ್ವೀಮರ (ಯುನಿಕ್) 2010, ದಿನಾಂಕ : 22-06-2010]**

2010-11ನೇ ಸಾಲಿನಿಂದ ಪ್ರಾರಂಭವಾಗುವಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಬಳ್ಳಾರಿ (ಪಶ್ಚಿಮ) ಈ ಕಛೇರಿಯನ್ನು (ಕಾರ್ಯಾಲಯದ ಅಧಿಕಾರಿ/ಸಿಬ್ಬಂದಿ, ಕಛೇರಿ ಪರಿಕರಗಳ ಜೊತೆಗೆ) ಬಳ್ಳಾರಿ ತಾಲ್ಲೂಕಿನ ಕುರುಗೋಡು ಗ್ರಾಮಕ್ಕೆ ಸ್ಥಳಾಂತರಿಸಲು ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗ ಇವರಿಗೆ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಮತ್ತು ಪದನಿಮಿತ್ತ

ಪಿ.ಆರ್. 1751

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಯೋಜನೆ)

**ಇಂಧನ ಸಚಿವಾಲಯ**

**ವಿಷಯ :** ಮೆ॥ ಜಗದಂಬ ಪವರ್ ಇವರಿಗೆ ಹಂಚಿಕೆ ಮಾಡಲಾಗಿರುವ 225 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಂಇ 134 ಎನ್‌ಸಿಇ 2002 ದಿನಾಂಕ: 27.06.2003.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 122 ಎನ್‌ಸಿಇ 2004 ದಿನಾಂಕ: 16.04.2004.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ: 17.4.2010.
4. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 158 ಎನ್‌ಸಿಇ 2010 ದಿನಾಂಕ: 26.04.2010.
5. ಮೆ॥ ಜಗದಂಬ ಪವರ್ ಇವರ ಪತ್ರ ದಿನಾಂಕ: 03.05.2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಜಗದಂಬ ಪವರ್ ಇವರಿಗೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ರಾಯ ಕಾಲುವೆಗೆ ಅಡ್ಡಲಾಗಿ (ತುಂಗಭದ್ರಾ ಅಣೆಕಟ್ಟಿನಿಂದ 0.8 ಕಿ.ಮೀ.) 175 ಕಿಲೋ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ತದನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಯೋಜನೆಯ ಸಾಮರ್ಥ್ಯವನ್ನು 175 ಕಿಲೋ ವ್ಯಾಟ್‌ನಿಂದ 225 ಕಿಲೋ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಆಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥ ಜಗದಂಬ ಪವರ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥ ಜಗದಂಬ ಪವರ್ ಇವರಿಗೆ ನೋಟೀಸನ್ನು ಕಳುಹಿಸಿ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕಾರಣ ಕೇಳುವ ನೋಟೀಸಿಗೆ ಅಭಿವೃದ್ಧಿದಾರರು ನೀಡಿರುವ ಉತ್ತರದಲ್ಲಿ ಡಿ.ಪಿ.ಆರ್. ತಯಾರಿಸಲಾಗಿದೆ. ನೀರಾವರಿ ಇಲಾಖೆಯ ಅನುಮೋದನೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಆರ್ಥಿಕ ಸಹಾಯಕ್ಕಾಗಿ ಆರ್ಥಿಕ ಸಂಸ್ಥೆಯನ್ನು ಸಂಪರ್ಕಿಸಲಾಗಿದೆ ಎಂದು ತಿಳಿಸಿರುತ್ತಾರೆ. ಅಲ್ಲದೆ, ಸ್ಥಳೀಯ ರೈತ ಸಂಘದವರು ಯೋಜನೆಯ ಬಗ್ಗೆ ಆಕ್ಷೇಪಣೆ ಸಲ್ಲಿಸಿರುವುದರಿಂದ, ಯೋಜನೆಯ ಅನುಷ್ಠಾನ ಮಾಡಲು ವಿಳಂಬವಾಗಿದೆ ಎಂದು ತಿಳಿಸಿರುತ್ತಾರೆ.

ಸ್ಥಳೀಯ ರೈತ ಸಂಘದ ಆಕ್ಷೇಪಣೆ ಇರುವುದರಿಂದ ಹಾಗೂ ಮೆ॥ ಜಗದಂಬ ಪವರ್ ಇವರಿಗೆ ಯೋಜನೆಯು ಹಂಚಿಕೆಯಾಗಿ 7 ವರ್ಷಗಳು ಕಳೆದಿದ್ದರೂ, ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಗಣನೀಯವಾದ ಪ್ರಗತಿಯನ್ನು ಸಾಧಿಸಿರುವುದು ಕಂಡು ಬಂದಿಲ್ಲದಿರುವುದರಿಂದ ಈಗಾಗಲೇ ನೀಡಲಾಗಿದ್ದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 158 ಎನ್‌ಸಿಇ 2010, ಬೆಂಗಳೂರು ದಿನಾಂಕ: 19-06-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 134 ಎನ್‌ಸಿಇ 2002 ದಿನಾಂಕ: 27.06.2003 ಮತ್ತು ಸರ್ಕಾರಿ ಆದೇಶ ಸಂಖ್ಯೆ: ಇಎನ್ 122 ಎನ್‌ಸಿಇ 2004 ದಿನಾಂಕ: 16.04.2004ರಲ್ಲಿ ಮೆ॥ ಜಗದಂಬ ಪವರ್ ಇವರಿಗೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ರಾಯ ಕಾಲುವೆಗೆ ಅಡ್ಡಲಾಗಿ (ತುಂಗಭದ್ರಾ ಅಣೆಕಟ್ಟಿನಿಂದ 0.8 ಕಿ.ಮೀ.) 225 ಕಿಲೋ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುಬಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1609

**ಎಸ್.ಜಿ. ಸಂಪತ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**ಕೃಷಿ ಸಚಿವಾಲಯ**

**ವಿಷಯ :** ಶ್ರೀ ಕೆ.ಎಲ್. ಚಂದ್ರಶೇಖರ್, ಸಹಾಯಕ ಕೃಷಿ ನಿರ್ದೇಶಕರು, (ಸೀರಿಯಲ್ಸ್) ಉಪ ಕೃಷಿ ನಿರ್ದೇಶಕರ ಕಚೇರಿ, ಆಹಾರ ಬೆಳೆಗಳು, ಬೆಂಗಳೂರು ಇವರಿಗೆ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ.

**ಓದಲಾಗಿದೆ :** 1) ಕೃಷಿ ಆಯುಕ್ತರ ಪತ್ರ ಸಂ: ಕ್ರಸಿಪ-(1)/ವಿವ 89/2009-10, ದಿನಾಂಕ 07-05-2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಕೃಷಿ ಆಯುಕ್ತ ಪ್ರಸ್ತಾವನೆಯಲ್ಲಿ ಶ್ರೀ ಕೆ.ಎಲ್. ಚಂದ್ರಶೇಖರ್, ಸಹಾಯಕ ಕೃಷಿ ನಿರ್ದೇಶಕರು, (ಸೀರಿಯಲ್ಸ್) ಉಪ ಕೃಷಿ ನಿರ್ದೇಶಕರ ಕಚೇರಿ, ಆಹಾರ ಬೆಳೆಗಳು, ಬೆಂಗಳೂರು ಇವರು ಕೌಟುಂಬಿಕ ಕಾರಣಗಳಿಂದಾಗಿ ಸ್ವಯಂ ನಿವೃತ್ತಿ ಹೊಂದಲು ಅನುಮತಿ ಕೋರಿ ಸಲ್ಲಿಸಿರುವ ದಿನಾಂಕ: 15-02-2010ರ ಮನವಿಯೊಂದಿಗೆ ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವಾದ್ದರಿಂದ ಸರ್ಕಾರದ ಬಾಕಿ ಏನಾದರೂ ಉದ್ಭವಿಸಿದಲ್ಲಿ ಕಟ್ಟುವ ಷರತ್ತಿಗೊಳಪಟ್ಟು, ದಿನಾಂಕ 31-07-2010ರಿಂದ ಅನ್ವಯಿಸುವಂತೆ ಸ್ವ-ಇಚ್ಛಾ ನಿವೃತ್ತಿಗೆ ಅನುಮತಿ ನೀಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 114 ಕೃಪಸೇ 2010, ಬೆಂಗಳೂರು, ದಿನಾಂಕ 10-06-2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಎಲ್. ಚಂದ್ರಶೇಖರ್, ಸಹಾಯಕ ಕೃಷಿ ನಿರ್ದೇಶಕರು, (ಸೀರಿಯಲ್ಸ್) ಉಪ ಕೃಷಿ ನಿರ್ದೇಶಕರ ಕಚೇರಿ, ಆಹಾರ ಬೆಳೆಗಳು, ಬೆಂಗಳೂರು ಇವರಿಗೆ ಅವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಅದನ್ನು ಅವರಿಗೆ ನೀಡಬೇಕಾದ ನಿವೃತ್ತಿ ಸವಲತ್ತುಗಳಿಂದ ವಸೂಲಿ ಮಾಡುವ ಷರತ್ತಿಗೊಳಪಟ್ಟು ದಿನಾಂಕ: 31-7-2010ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 285(1) (ಎ) ಅನ್ವಯ ಅವರಿಗೆ ಸ್ವ-ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1610

**ಜಿ.ಕೆ. ಗುರಾಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** ಮಂಗಳೂರು ವಿಶೇಷ ಆರ್ಥಿಕವಲಯ ಯೋಜನೆಯಿಂದ ಸಂತ್ರಸ್ತರಾಗುವ ಕುಟುಂಬಗಳಿಗೆ ಮಂಜೂರು ಮಾಡಿರುವ ಪುನರ್ ನಿರ್ಮಾಣ ಮತ್ತು ಪುನರ್ವಸತಿ ಸೌಲಭ್ಯಗಳ ಪ್ಯಾಕೇಜಿನಲ್ಲಿ ತಿದ್ದುಪಡಿ/ಸೇರ್ಪಡೆಗಳನ್ನು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 309 ಆರ್.ಇ.ಹೆಚ್.2006, ದಿನಾಂಕ: 20-06-2007.
2. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ಪತ್ರ ಸಂಖ್ಯೆ: ಎಲ್.ಎ.ಕ್ಯೂ./ಇತರೆ/ಸಿಆರ್ 93/07-08. ದಿನಾಂಕ: 24-02-2009.
3. ವ್ಯವಸ್ಥಾಪಕ ನಿರ್ದೇಶಕರು, ಮಂಗಳೂರು, ವಿಶೇಷ ಆರ್ಥಿಕ ವಲಯ ನಿಯಮಿತ ಇವರ ಪತ್ರ ಸಂಖ್ಯೆ:ಎಂಎಸ್ಇಝೆಡ್‌ಎಲ್/364/2009-10 ದಿನಾಂಕ: 17.07.2009.

**ಪ್ರಸ್ತಾವನೆ :**

ಓ.ಎನ್.ಜಿ.ಸಿ. ಕರ್ನಾಟಕ ಸರ್ಕಾರ ಮತ್ತು ಕೆನರಾ ವಾಣಿಜ್ಯ ಮತ್ತು ಕೈಗಾರಿಕಾ ಮಂಡಳಿಗಳು ಮಂಗಳೂರು ಪ್ರದೇಶದ ವ್ಯಾಪ್ತಿಯಲ್ಲಿ ಕೈಗಾರಿಕೆಗಳ ಅಭಿವೃದ್ಧಿಗಾಗಿ ಮಂಗಳೂರು ವಿಶೇಷ ಆರ್ಥಿಕ ವಲಯ ನಿಯಮಿತವನ್ನು ಸ್ಥಾಪನೆ ಮಾಡಲು ಉದ್ದೇಶಿಸಿದ್ದು ಇದಕ್ಕಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ದಕ್ಷಿಣ ಕನ್ನಡ ಜಿಲ್ಲೆಯ ಪೆರ್ಮುದೆ, ಕಳಾವರ್, ಬಜ್ಪೆ ಥೋಕೂರ್, ಬಾಳಾ, ಕುತೆತ್ತೂರು, ದೇಲಂತಬೆಟ್ಟು ಮತ್ತು ತೆಂಕಯೆಕ್ಕಾರ್ ಗ್ರಾಮಗಳಲ್ಲಿ ಸುಮಾರು 4500 ಎಕರೆ ಜಮೀನನ್ನು ಸ್ವಾಧೀನ ಪಡಿಸುತ್ತಿದೆ. ಮಂಗಳೂರು ವಿಶೇಷ ಆರ್ಥಿಕ ವಲಯ ನಿಯಮಿತ ಯೋಜನೆಯಿಂದ ಬಾಧಿತರಾಗಿರುವ ಕುಟುಂಬಗಳಿಗೆ ಪುನರ್ ನಿರ್ಮಾಣ ಮತ್ತು ಪುನರ್ವಸತಿ ಸೌಲಭ್ಯಗಳನ್ನು ಒದಗಿಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 20.06.2007ರ ಆದೇಶದಲ್ಲಿ ಪುನರ್ವಸತಿ ಪ್ಯಾಕೇಜನ್ನು ಮಂಜೂರು ಮಾಡಲಾಗಿರುತ್ತದೆ. ಈ ಪುನರ್ವಸತಿ ಪ್ಯಾಕೇಜಿನ ಅಂದಾಜು ವೆಚ್ಚ ರೂ. 131 ಕೋಟಿಗಳಾಗಿರುತ್ತವೆ.

ಈ ಪುನರ್ವಸತಿ ಪ್ಯಾಕೇಜನ್ನು ಅನುಷ್ಠಾನಗೊಳಿಸುವ ಸಲುವಾಗಿ ಸರ್ಕಾರಿ ಆದೇಶ ಸಂಖ್ಯೆ : ಕಂಇ 71 ಆರ್‌ಇಹೆಚ್ 2008. ದಿನಾಂಕ: 9.6.2008 ರಲ್ಲಿ ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಂತ್ರಸ್ಥ ಕುಟುಂಬಗಳ ಪ್ರತಿನಿಧಿಗಳನ್ನು ಒಳಗೊಂಡಂತೆ ಪುನರ್ವಸತಿ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯು ಆಗಿಂದಾಗ್ಗೆ ಸಭೆ ಸೇರಿ ಪುನರ್ವಸತಿ ಪ್ಯಾಕೇಜನ್ನು ಅನುಷ್ಠಾನಗೊಳಿಸುವ ಬಗ್ಗೆ ಕ್ರಮ ಕೈಗೊಳ್ಳುತ್ತಿದೆ.

ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಸಂತ್ರಸ್ಥ ಕುಟುಂಬಗಳಿಗೆ ಮಂಜೂರು ಮಾಡಿರುವ ಪುನರ್ವಸತಿ ಪ್ಯಾಕೇಜಿನಲ್ಲಿ ಕೆಲವೊಂದು ತಿದ್ದುಪಡಿಗಳನ್ನು ಹಾಗೂ ಸೇರ್ಪಡೆಗಳನ್ನು ಮಾಡುವ ಅಗತ್ಯವಿದೆಯೆಂದು ತಿಳಿಸಿರುತ್ತಾರೆ. ಹಾಲಿ ಮಂಜೂರು ಮಾಡಿರುವ ಪುನರ್ವಸತಿ ಸೌಲಭ್ಯಗಳಲ್ಲಿ ಕೆಲವೊಂದು ಬದಲಾವಣೆ ಮಾಡುವಂತೆ ಹಾಗೂ ಕೆಲವು ಹೆಚ್ಚುವರಿ ಸೌಲಭ್ಯಗಳನ್ನು ಮಂಜೂರು ಮಾಡುವಂತೆ ಯೋಜನಾ ಸಂತ್ರಸ್ಥ ಕುಟುಂಬಗಳು ಪುನರ್ವಸತಿ ಸಮಿತಿ ಮುಂದೆ ಬೇಡಿಕೆ ಇಟ್ಟಿದ್ದು ಅವುಗಳನ್ನು ಸಮಿತಿಯ ಸಭೆಯಲ್ಲಿ ಚರ್ಚಿಸಲಾಗಿದೆ ಎಂದು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. ಸಂತ್ರಸ್ತ ಕುಟುಂಬಗಳಿಗೆ ಪೂರ್ಣ ಪ್ರಮಾಣದ ಪುನರ್ವಸತಿ ಕಲ್ಪಿಸುವ ದೃಷ್ಟಿಯಿಂದ ಈ ಪ್ರಸ್ತಾವನೆಯನ್ನು ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆ ಕುರಿತು ಮಂಗಳೂರು ವಿಶೇಷ ಆರ್ಥಿಕ ವಲಯ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಅಭಿಪ್ರಾಯ ಪಡೆಯಲಾಗಿದೆ. ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಪ್ರಸ್ತಾಪಿತ ತಿದ್ದುಪಡಿ ಮತ್ತು ಸೇರ್ಪಡೆಗಳನ್ನು ಮಾಡಲು ಒಪ್ಪಿರುತ್ತಾರೆ. ಈ ತಿದ್ದುಪಡಿ ಮತ್ತು ಸೇರ್ಪಡೆಗಳಿಂದ ಮಂಗಳೂರು ವಿಶೇಷ ಆರ್ಥಿಕ ವಲಯ ನಿಯಮಿತವು ಹೆಚ್ಚುವರಿಯಾಗಿ ರೂ. 18,548 ಕೋಟಿಗಳನ್ನು ಭರಿಸಬೇಕಿರುತ್ತದೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 83 ಆರ್‌ಇಹೆಚ್ 2009, ಬೆಂಗಳೂರು, ದಿನಾಂಕ 16–06–2010**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ ಸರ್ಕಾರವು ಮಂಗಳೂರು ವಿಶೇಷ ಆರ್ಥಿಕ ವಲಯ ಯೋಜನೆಯಿಂದ ಸಂತ್ರಸ್ಥರಾದ ಕುಟುಂಬಗಳಿಗೆ ಸರ್ಕಾರಿ ಆದೇಶ ಸಂಖ್ಯೆ ಕಂಇ 309 ಆರ್‌ಇಹೆಚ್ 2006 ದಿನಾಂಕ: 20.06.2007 ರಲ್ಲಿ ಮಂಜೂರು ಮಾಡಿರುವ ಪುನರ್ವಸತಿ ಪ್ಯಾಕೇಜಿನಲ್ಲಿನ ಸೌಲಭ್ಯಗಳಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವಂತೆ ತಿದ್ದುಪಡಿ/ಸೇರ್ಪಡೆಗಳನ್ನು ಮಾಡಿದೆ.

ಈ ತಿದ್ದುಪಡಿ/ಸೇರ್ಪಡೆಗಳಿಂದ ಆಗುವ ಹೆಚ್ಚುವರಿ ವೆಚ್ಚವನ್ನು ಮಂಗಳೂರು ವಿಶೇಷ ಆರ್ಥಿಕ ವಲಯ ನಿಯಮದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ. 1133 ವೆಚ್ಚ 07–2008 ದಿನಾಂಕ : 25.03.2010 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1611

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ :** ಶ್ರೀ ಎನ್. ನಾರಾಯಣಾಚಾರ್, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ, ಇವರನ್ನು ಅಮಾನತ್ತಿನಲ್ಲಿಡುವ ಕುರಿತು.

**ಓದಲಾಗಿದೆ :** 1) ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ:ಗಭೂಇ/ಸಿಬ್ಬಂದಿ–ಅ–3/ಶಿಸ್ತು/2009–10/1605.

**ಪ್ರಸ್ತಾವನೆ :**

ಶ್ರೀ ಎನ್. ನಾರಾಯಣಾಚಾರ್, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ, ಅನಧಿಕೃತ ಗಣಿಗಾರಿಕೆ/ಸಾಗಾಣಿಕೆ ಹಾಗೂ ಪ್ರತಿನಿತ್ಯದ ಮುಖ್ಯ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿದ್ದು, ಇವುಗಳಿಗೆ ಗಮನ ಕೊಡದೇ, ಸಕ್ರಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕಛೇರಿಗೆ ಗೈರುಹಾಜರಾಗುತ್ತಿದ್ದು, ಪದೇ ಪದೇ ಕರ್ತವ್ಯದಲ್ಲಿ ನಿರ್ಲಕ್ಷ್ಯತೆಯನ್ನು ತೋರುತ್ತಾ, ಬೇಜವಾಬ್ದಾರಿಯಿಂದ ವರ್ತಿಸಿರುವ ಪ್ರಯುಕ್ತ, ಇಂತಹ ಬೇಜವಾಬ್ದಾರಿಯುತ ಅಧಿಕಾರಿಯನ್ನು ಸರ್ಕಾರಿ ಕೆಲಸದಲ್ಲಿ ಮುಂದುವರೆಸಲು ಅನರ್ಹರೆಂದು ಅಭಿಪ್ರಾಯಪಟ್ಟು, ಇವರು ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಾವಳಿಗಳು 1957 ರ ನಿಯಮ–10(1)(ಎ) ಮತ್ತು (ಬಿ) ಅನ್ವಯ ಈ ಅಧಿಕಾರಿಯನ್ನು ಸೇವೆಯಿಂದ ಅಮಾನತ್ತುಗೊಳಿಸಲು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ (1) ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ

**ಸರ್ಕಾರಿ ಆದೇಶ ಸಂಖ್ಯೆ: ಸಿಐ 57: ಎಂಜಿಎಸ್ 2010, ಬೆಂಗಳೂರು, ದಿನಾಂಕ 19–06–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ಎನ್. ನಾರಾಯಣಚಾರ್, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ, ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಈ ಅಧಿಕಾರಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರ ಪ್ರಕಾರ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎನ್. ನಾರಾಯಣಚಾರ್, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ, ಇವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎನ್. ನಾರಾಯಣಚಾರ್, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ, ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿ ಪಡೆಯದೆ ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1612

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಬಿ. ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್ ಇವರಿಗೆ ತಹಶೀಲ್ದಾರ್ ಗುಂಪು–ಬಿ ವೃಂದಕ್ಕೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಅವರ ಪತ್ರ ಸಂ: ಇಎಸ್‌ಟಿ(1) ಸಿಆರ್: 64/2007–08, ದಿನಾಂಕ: 13–12–2007.

2) ಶ್ರೀ ಬಿ. ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್ ಇವರ ಮನವಿ ದಿನಾಂಕ 22.12.2008.

3) ಕೆ.ಪಿ.ಎಸ್.ಸಿ. ಪತ್ರ ಸಂ: ಪಿಎಸ್‌ಸಿ 32 ಸಿಎನ್‌ಎಸ್ 09, ದಿನಾಂಕ: 20–03–2010.

**ಪ್ರಸ್ತಾವನೆ :**

ಶ್ರೀ ಬಿ. ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್ ಇವರು ಶಿರಸ್ತೇದಾರ್ ಜೇಷ್ಠತಾ ಪಟ್ಟಿಯಲ್ಲಿ ಅವರ ಜನ್ಮ ದಿನಾಂಕ: 10–01–1950ರ ಬದಲಾಗಿ 01–01–1950 ಎಂದು ತಪ್ಪಾಗಿ ನಮೂದಿಸಿದುದರಿಂದ ಆ ವೇಳೆಗೆ ಸದರಿ ನೌಕರರು ವಯೋ ನಿವೃತ್ತಿ ಹೊಂದಿರುವುದಾಗಿ ತಪ್ಪಾಗಿ ಅರ್ಥೈಸಿ, ಅವರ ಹೆಸರನ್ನು ಬಿಟ್ಟು ಅವರಿಗಿಂತ ಕಿರಿಯವರಿಗೆ ಸರ್ಕಾರದ ಅಧಿಸೂಚನೆ ಸಂ: ಕಂಇ 329 ಎಎಸ್‌ಡಿ 2007, ದಿನಾಂಕ: 28–01–2008ರಲ್ಲಿ ಒಟ್ಟು 92 ಜನ ಗ್ರೇಡ್–2 ತಹಶೀಲ್ದಾರರಿಗೆ ಪದೋನ್ನತಿ ನೀಡಲಾಗಿದೆಯೆಂದು ಸದರಿಯವರು ದಿನಾಂಕ: 28–01–2008ರಂದು ಸೇವೆಯಲ್ಲಿದ್ದು ದಿನಾಂಕ: 31–01–2008ರಂದು ವಯೋ ನಿವೃತ್ತಿ ಹೊಂದಿರುವುದರಿಂದ ಅವರ ಕಿರಿಯರಿಗೆ ಪದೋನ್ನತಿ ನೀಡಿದಂತೆ ಇವರಿಗೂ ಗ್ರೇಡ್–2 ತಹಶೀಲ್ದಾರ್ ವೃಂದದಲ್ಲಿ ಪೂರ್ವಾನ್ವಯವಾಗಿ ಮುಂಬಡ್ತಿ ನೀಡಲು ಮೇಲೆ ಓದಲಾದ (1) ಮತ್ತು (2)ರಲ್ಲಿ ಕೋರಿರುತ್ತಾರೆ.

ನೌಕರರ ಸೇವಾ ಪುಸ್ತಕ ಹಾಗೂ ಅವರಿಗೆ ನಿವೃತ್ತಿ ಹೊಂದಲು ನೀಡಿದ ದಿನಾಂಕ: 01–01–2008ರ ಅನುಮತಿ ಆದೇಶವನ್ನು ಪರಿಶೀಲಿಸಲಾಗಿ ಸದರಿ ನೌಕರರು ದಿನಾಂಕ: 31–01–2008ರಂದು ನಿವೃತ್ತಿ ಹೊಂದಿರುತ್ತಾರೆ. ಸರ್ಕಾರದ ಅಧಿಸೂಚನೆ ಸಂ: ಆರ್‌ಡಿ 496 ಬಿಎಂಎಂ 2006, ದಿನಾಂಕ: 24–08–2006 ರಂದು ಅಂತಿಮವಾಗಿ ಪ್ರಕಟಿಸಿದ ಶಿರಸ್ತೇದಾರ್/ಉಪತಹಶೀಲ್ದಾರರುಗಳ ಜೇಷ್ಠತಾ ಪಟ್ಟಿಯನ್ನು ಪರಿಶೀಲಿಸಲಾಗಿ ಇವರ ಜೇಷ್ಠತಾ ಪಟ್ಟಿಯಲ್ಲಿಯ ಕ್ರ.ಸಂ. 3907 ಇದ್ದು, ಅವರಿಗಿಂತ ಕಿರಿಯವರಾದ ಶ್ರೀ ಎ.ಎನ್. ಬಶೀರ್ ಅಹ್ಮದ್ ಇವರ ಕ್ರ.ಸಂ. 3908 ಇರುತ್ತದೆ. ಶ್ರೀ ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್ ಇವರು ಮುಂಬಡ್ತಿ ಹೊಂದಲು ಅರ್ಹರಾಗಿರುತ್ತಾರೆಂದು ತೀರ್ಮಾನಿಸಿ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯವರಾದ ಶ್ರೀ ಎ.ಎನ್. ಬಶೀರ್‌ಅಹ್ಮದ್ ಇವರಿಗೆ ದಿನಾಂಕ: 28–01–2008ರಲ್ಲಿ ಶಿರಸ್ತೇದಾರ್ ವೃಂದದಿಂದ ತಹಶೀಲ್ದಾರ್ ಗ್ರೂಪ್–ಬಿ ವೃಂದಕ್ಕೆ ನೀಡಿದ್ದರಿಂದ ಶ್ರೀ ಸತ್ಯನಾರಾಯಣರಾವ್ ಇವರಿಗೂ ಸಹ ಕರ್ನಾಟಕ ನಾಗರೀಕ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಗಳು 1978ರ ನಿಯಮ 2(1) ರನ್ವಯ ಪೂರ್ವಾನ್ವಯವಾಗಿ ಮುಂಬಡ್ತಿ ನೀಡಲು ನಿರ್ಧರಿಸಿ ಈ ಬಗ್ಗೆ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(3)ರ ಪತ್ರದಲ್ಲಿ ಲೋಕಸೇವಾ ಆಯೋಗವು ಶ್ರೀ ಬಿ. ಸತ್ಯನಾರಾಯಣರಾವ್, ಶಿರಸ್ತೇದಾರ್ (ನಿವೃತ್ತ) ಇವರಿಗೆ ತಹಶೀಲ್ದಾರ್, ಗ್ರೇಡ್–2 ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡಲು ಸಹಮತಿ ನೀಡಿರುತ್ತಾರೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂ: ಆರ್‌ಡಿ 119 ಎಎಸ್‌ಡಿ 2009, ಬೆಂಗಳೂರು, ದಿನಾಂಕ 29–05–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಬಿ. ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್ ಇವರಿಗೆ ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯವರಾದ ಶ್ರೀ ಎ.ಎನ್. ಬಶೀರ್‌ಅಹ್ಮದ್ ಇವರಿಗೆ ಶಿರಸ್ತೇದಾರ್ ವೃಂದದಿಂದ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ಮುಂಬಡ್ತಿ ನೀಡಿದ ದಿನಾಂಕ: 28–01–2008ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಗಳು 1978ರ ನಿಯಮ 2(1)ರನ್ವಯ ಪೂರ್ವಾನ್ವಯವಾಗಿ ತಹಶೀಲ್ದಾರ್ ಗ್ರೇಡ್–2 ಹುದ್ದೆಗೆ ವೇತನ ಶ್ರೇಣಿ ರೂ. 11,400–21,600 ರಲ್ಲಿ ಮುಂಬಡ್ತಿ ನೀಡಿ ಹಾಗೂ ತತ್ಪರಿಣಾಮವಾಗಿ ಲಭ್ಯವಾಗುವ ಸವಲತ್ತುಗಳನ್ನು ನೀಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1613

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ,(ಸೇವೆಗಳು–3).

**ಕಂದಾಯ ಸಚಿವಾಲಯ**

**ವಿಷಯ :** ಕೆ.ಆರ್. ಪುರಂ ತಾಲ್ಲೂಕಿನ ಕ್ಯಾಲಸನಹಳ್ಳಿ ಗ್ರಾಮದ ಸರ್ವೆ ನಂ. 11ರಲ್ಲಿ ಸರ್ಕಾರಿ ಜಮೀನನ್ನು ಪರಭಾರೆ ಮಾಡಿರುವ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಕುರಿತು.

**ಉಲ್ಲೇಖ :** 1) ಶಾಸಕರು, ಕೆ.ಆರ್.ಪುರಂ, ಬೆಂ.ನಗರ ಜಿಲ್ಲೆ ಇವರ ದಿ: 16.6.2010ರ ಪತ್ರ.

2) ಸರ್ಕಾರದ **ಅ**.ಸ.ಪತ್ರ ಸಂಖ್ಯೆ:ಕಂಇ 31 ಎಡಿಇ 2010 ದಿ: 17.06.2010

3) ಬೆಂಗಳೂರು ನಗರ ಜಿಲ್ಲಾಧಿಕಾರಿ ಇವರ ಅ.ಸ.ಪತ್ರ ಸಂಖ್ಯೆ:ಡಿಸಿ/ಪಿಎ/ಸಿಆರ್:4:2010–11 ದಿನಾಂಕ : 17.06.2010

**ಓದಲಾಗಿದೆ :**

ಕೆ.ಆರ್.ಪುರಂ ಶಾಸಕರು ಬೆಂಗಳೂರು ನಗರ ಜಿಲ್ಲೆ ಇವರು ಮಾನ್ಯ ಮುಖ್ಯ ಮಂತ್ರಿಗಳಿಗೆ ಪತ್ರ ಬರೆದು ಕೆ.ಆರ್.ಪುರಂ ತಾಲ್ಲೂಕಿನ ಕ್ಯಾಲಸನ ಹಳ್ಳಿ ಗ್ರಾಮದ ಸರ್ವೆ ನಂ. 11ರಲ್ಲಿ ಸರ್ಕಾರಿ ಜಮೀನನ್ನು ಕೆಲವರಿಗೆ ತಹಶೀಲ್ದಾರ್‌ರವರು ಮಂಜೂರು ಮಾಡಿ ಸಾಗುವಳಿ ಚೀಟಿ ನೀಡಿ

ಜಮೀನನ್ನು ಪರಭಾರೆ ಮಾಡಿದ್ದು, ಇದಕ್ಕೆ ಸರ್ಕಾರದ ಅನುಮತಿಯನ್ನು ಪಡೆದಿರುವುದಿಲ್ಲ. ಸರ್ಕಾರದ ನೀತಿ ನಿಯಮಗಳನ್ನು ಗಾಳಿಗೆ ತೂರಿ ಕೆ.ಆರ್.ಪುರಂ ತಹಶೀಲ್ದಾರರು ಅವ್ಯವಹಾರಗಳಿಗೆ ಆಸ್ಪದ ನೀಡಿದ್ದು, ಈ ಬಗ್ಗೆ ಕೂಲಂಕಷವಾದ ವರದಿಯನ್ನು ಪಡೆದು ಸಂಬಂಧಿಸಿದ ಅಧಿಕಾರಿಗಳು ಅವ್ಯವಹಾರ ಎಸಗಿದ್ದಲ್ಲಿ ಅವರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳುವಂತೆ ಮಾನ್ಯ ಮುಖ್ಯ ಮಂತ್ರಿಗಳನ್ನು ಕೋರಿರುತ್ತಾರೆ.

ಉಲ್ಲೇಖ (2)ರಲ್ಲಿಯ ಸರ್ಕಾರದ ಪತ್ರದಲ್ಲಿ ಈ ಬಗ್ಗೆ ಕೂಲಂಕಷವಾಗಿ ತನಿಖೆ ನಡೆಸಿ ವರದಿ ಸಲ್ಲಿಸುವಂತೆ ಬೆಂಗಳೂರು ನಗರ ಜಿಲ್ಲೆ ಇವರನ್ನು ಕೋರಲಾಗಿತ್ತು. ಅದರಂತೆ, ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ತನಿಖೆ ನಡೆಸಿ ವರದಿ ಸಲ್ಲಿಸಿರುತ್ತಾರೆ. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಇವರು ದಿನಾಂಕ 17.06.2010ರಂದು ಮಧ್ಯಾಹ್ನ 12–15ಕ್ಕೆ ಸಂಬಂಧಿತ ಬೆಂಗಳೂರು ಪೂರ್ವ ತಾಲ್ಲೂಕಿನ ತಹಶೀಲ್ದಾರರಿಗೆ ಅವರ ಕಛೇರಿಯ ದೂರವಾಣಿಗೂ ಮತ್ತು ಮೊಬೈಲಿಗೂ ಕರೆ ಮಾಡಿ ಸದರಿ ಪ್ರಕರಣದ ಕಡತವನ್ನು ತಕ್ಷಣವೇ ವಿಶೇಷ ಜಿಲ್ಲಾಧಿಕಾರಿಯವರ ಕಛೇರಿಗೆ ತಂದು ಒಪ್ಪಿಸಬೇಕೆಂದು ತಿಳಿಸಿರುತ್ತಾರೆ. ಅಲ್ಲದೇ, ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ಇವರಿಗೂ ವಿಶೇಷ ಜಿಲ್ಲಾಧಿಕಾರಿಯವರ ಕಛೇರಿಯಿಂದ ದೂರವಾಣಿ ಮೂಲಕ ನೀಡಿದ ನಿರ್ದೇಶನವನ್ನು ಆಧರಿಸಿ ಅವರು ತಮ್ಮ ಕಛೇರಿಯಿಂದ ವ್ಯವಸ್ಥಾಪಕರ ನೇತೃತ್ವದಲ್ಲಿ ಒಂದು ತಂಡವನ್ನು ರಚಿಸಿ ಬೆಂಗಳೂರು ಪೂರ್ವ ತಾಲ್ಲೂಕು ಕಛೇರಿಗೆ ಕಳುಹಿಸಿರುತ್ತಾರೆ.

ಆದರೆ ಉಪ ವಿಭಾಗಾಧಿಕಾರಿಗಳ ಕಛೇರಿಯ ವ್ಯವಸ್ಥಾಪಕರು ತಮ್ಮ ತಂಡದೊಂದಿಗೆ ತಹಶೀಲ್ದಾರ್ ಕಛೇರಿಗೆ ಹೋದಾಗ ತಹಶೀಲ್ದಾರ್ ಅವರು ತಾಲ್ಲೂಕು ಕಛೇರಿಯಲ್ಲಿ ಇರಲಿಲ್ಲವೆಂದು, ವಿಚಾರಿಸಲಾಗಿ ಅವರು ಈ ದಿನ ಕಛೇರಿಗೆ ಬಂದಿಲ್ಲವೆಂಬುದು ತಿಳಿದು ಬಂದಿರುತ್ತದೆ.

ಏತನ್ಮಧ್ಯೆ ಜಿಲ್ಲಾಧಿಕಾರಿಯವರು ಹಲವಾರು ಬಾರಿ ತಹಶೀಲ್ದಾರ್‌ರವರನ್ನು ಸಂಪರ್ಕಿಸಲು ದೂರವಾಣಿ ಮತ್ತು ಮೊಬೈಲ್ ಮೂಲಕ ಪ್ರಯತ್ನಿಸಿದ್ದು, ಆ ಎಲ್ಲಾ ಸಂದರ್ಭಗಳಲ್ಲಿ ಅವರು ಜಿಲ್ಲಾಧಿಕಾರಿಗಳ ಕರೆಗಳನ್ನು ಸ್ವೀಕರಿಸಿರುವುದಿಲ್ಲ.

ಆದರೆ ಜಿಲ್ಲಾಧಿಕಾರಿಯವರು ಸಂಜೆ 5.35 ಗಂಟೆಗೆ ಮತ್ತೊಮ್ಮೆ ಅವರಿಗೆ ಮೊಬೈಲ್ ಮೂಲಕ ಕರೆಯನ್ನು ಮಾಡಿದಾಗ ಅವರು (ಶ್ರೀಮತಿ ಎಸ್.ಎಂ. ಆಶಾ ಪರ್ವೀನ್) ಜಿಲ್ಲಾಧಿಕಾರಿಯ ಕರೆಯನ್ನು ತೆಗೆದುಕೊಂಡು, ಇನ್ನೂ 10 ನಿಮಿಷದಲ್ಲಿ ಪ್ರಶ್ನಿತ ಕಡತದೊಂದಿಗೆ ಅವರ ಎದುರಿಗೆ ಹಾಜರಾಗುವುದಾಗಿ ತಿಳಿಸಿದರು. ಆದರೆ ಈ ವರದಿಯನ್ನು ತಯಾರಿಸುತ್ತಿರುವ ಸಮಯ ರಾತ್ರಿ 7.30 ಗಂಟೆಯವರೆಗೂ ಸಹ ಅವರು ಜಿಲ್ಲಾಧಿಕಾರಿ ಎದುರು ಕಡತದೊಂದಿಗೆ ಹಾಜರಾಗಿರುವುದಿಲ್ಲ.

ಕಡತ ಯಾರ ಬಳಿ ಇದೆ ಎಂಬುದನ್ನು ವಿಚಾರಿಸಿದಾಗ, ಬೆಂಗಳೂರು ಪೂರ್ವ ತಾಲ್ಲೂಕು ಕಛೇರಿಯ ತಾಲ್ಲೂಕು ಶಿರಸ್ತೇದಾರರಾದ ಶ್ರೀ ನಾಗಯ್ಯರವರು ಅವರ ಲಿಖಿತ ಹೇಳಿಕೆಯಲ್ಲಿ ಈ ದಿನ ತಹಶೀಲ್ದಾರರು ಕಛೇರಿಗೆ ಬಂದಿಲ್ಲವೆಂದು ಮತ್ತು ಪ್ರಶ್ನಿತ ಕಡತ ಅವರ ಬಳಿಯೇ ಕಳೆದ ಒಂದು ತಿಂಗಳಿನಿಂದಲೂ ಇಟ್ಟಿಕೊಂಡಿರುವುದಾಗಿ ತಿಳಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ದಿನಾಂಕ 23.04.2010ರಂದು ಗ್ರಾಮಸ್ಥರು ನೀಡಿದ ದೂರಿನ ಮೇರೆಗೆ ವಿಶೇಷ ಜಿಲ್ಲಾಧಿಕಾರಿಗಳು (ಕಂದಾಯ) ಬೆಂಗಳೂರು ನಗರ ಜಿಲ್ಲೆ ಇವರು ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ಇವರಿಗೆ ಅರೆ ಸರ್ಕಾರಿ ಪತ್ರವನ್ನು ಬರೆದು ಈ ದೂರಿನಲ್ಲಿನ ಆಪಾದನೆಗಳ ಬಗ್ಗೆ ಪರಿಶೀಲಿಸಿ ವಿವರವಾದ ವರದಿ ಸಲ್ಲಿಸುವಂತೆ ಸೂಚಿಸಿರುತ್ತಾರೆ. ಇದನ್ನು ಆಧರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ಇವರು ದಿನಾಂಕ 06.05.2010ರಂದು ತಮ್ಮ ಪತ್ರದ ಸಂಖ್ಯೆ:ಎಲ್‌ಎನ್‌ಡಿ/ಸಿಆರ್: 14:10–11ರಲ್ಲಿ ಬೆಂಗಳೂರು ಪೂರ್ವ ತಾಲ್ಲೂಕಿನ ತಹಶೀಲ್ದಾರರಿಗೆ ಅರೆ ಸರ್ಕಾರಿ ಪತ್ರವನ್ನು ಬರೆದು ಅದರಲ್ಲಿ ಪ್ರಶ್ನಿತ ಪ್ರಕರಣದ ಬಗ್ಗೆ ವರದಿಯನ್ನು ನೀಡುವಂತೆ ನಿರ್ದೇಶಿಸಿರುತ್ತಾರೆ. ಈಗ ತಿಳಿದು ಬಂದಿರುವ ಪ್ರಕಾರ ಈ ತಹಲ್‌ವರೆವಿಗೂ ಉಪ ವಿಭಾಗಾಧಿಕಾರಿಗಳಿಗೂ ಸಹ ಸದರಿ ವರದಿಯನ್ನು ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕುರವರು ನೀಡಿರುವುದಿಲ್ಲ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡರೇ ಸ್ಪಷ್ಟವಾಗಿ ವೇದ್ಯವಾಗುವ ಅಂಶವೇನೆಂದರೆ ಶ್ರೀಮತಿ ಎಸ್.ಎಂ. ಆಶಾ ಪರ್ವೀನ್, ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕುರವರು ಪ್ರಶ್ನಿತ ಕಡತವನ್ನು ಮೇಲಾಧಿಕಾರಿಗಳ ನಿರ್ದಿಷ್ಟ ಸೂಚನೆಯನ್ನು ಮತ್ತು ನಿರ್ದೇಶನವನ್ನು ಪಾಲಿಸದೇ ತಮ್ಮ ಬಳಿಯೇ ಇಟ್ಟುಕೊಂಡಿರುವುದು ಮತ್ತು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಮಾನ್ಯ ಶಾಸಕರು ಹಾಗೂ ಇತರೆ ಗ್ರಾಮಸ್ಥರು ಮಾಡಿರುವ ದೂರುಗಳ ಬಗ್ಗೆ ತಮ್ಮ ಸ್ಪಷ್ಟೀಕರಣವನ್ನು ಮತ್ತು ವರದಿಯನ್ನು ಸಲ್ಲಸದೇ ಇರುವುದು, ಅಲ್ಲದೇ ಕಛೇರಿಗೆ ಹಾಜರಾಗದೆ ಈ ವರದಿ ಮತ್ತು ಕಡತವನ್ನು ನೀಡಬೇಕಾಗುತ್ತದೆಂಬ ಪ್ರಮೇಯವನ್ನು ತಪ್ಪಿಸಿಕೊಳ್ಳುವ ದೃಷ್ಟಿಯಿಂದ ಈ ಕಛೇರಿಗೂ ಹಾಜರಾಗದೇ ಇರುವುದರಿಂದ ಈ ಪ್ರಕರಣದಲ್ಲಿ ಅವರು ಕಾನೂನು ಬಾಹಿರ ಕೃತ್ಯ ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿದೆ ಎಂದು ಅಭಿಪ್ರಾಯಪಡುತ್ತೇನೆಂದು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ.

ಮೇಲಿನ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಲಾಗಿ, ಶ್ರೀಮತಿ ಎಸ್.ಎಂ. ಆಶಾ ಪರ್ವೀನ್, ತಹಶೀಲ್ದಾರ್ ಬೆಂಗಳೂರು ಪೂರ್ವ ತಾಲ್ಲೂಕು ಇವರು ಕೆ.ಆರ್.ಪುರಂ ಹೋಬಳಿಯ ಕ್ಯಾಲಸನಹಳ್ಳಿ ಗ್ರಾಮ ಸರ್ವೆ ನಂ. 11ರಲ್ಲಿ ಸರ್ಕಾರಿ ಜಮೀನನ್ನು (ಗೋಮಾಳ) ಅನರ್ಹರಿಗೆ ಕಾನೂನು ಬಾಹಿರವಾಗಿ ಮಂಜೂರು ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವಂತೆ ಕಂಡು ಬಂದಿದ್ದು, ಸದರಿ ಅಧಿಕಾರಿಗಳು ಕಛೇರಿಗೂ ಹಾಜರಾಗದೆ ಅನಧಿಕೃತವಾಗಿ ಮೇಲಧಿಕಾರಿಗಳ ಆದೇಶವಿಲ್ಲದೆ ಕಡತವನ್ನು ಮನೆಗೆ ತೆಗೆದುಕೊಂಡು ಹೋಗಿರುವುದು ಗುರುತರವಾದ ಹಾಗೂ ಶಿಕ್ಷಾರ್ಹ ಅಪರಾಧ ಎಸಗಿರುತ್ತಾರೆ. ಈ ಪ್ರಕರಣದಲ್ಲಿ ಕೂಲಂಕಷ ವಿಚಾರಣೆ ನಡೆಸುವುದು ಅವಶ್ಯವಾಗಿರುವುದರಿಂದ, ಈ ಅಧಿಕಾರಿಯನ್ನು ಸೇವೆಯಲ್ಲಿ ಮುಂದುವರೆಸಿದರೆ ದಾಖಲೆಗಳನ್ನು ತಿದ್ದುವ, ನಾಶಪಡಿಸುವ ಹಾಗೂ ಸಾಕ್ಷಿಗಳ ಮೇಲೆ ಪ್ರಭಾವ ಬೀರುವ ಸಾಧ್ಯತೆ ಇರುವುದರಿಂದ, ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 31 ಎಡಿಇ 2010, ಬೆಂಗಳೂರು, ದಿನಾಂಕ 17–06–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀಮತಿ ಆಶಾ ಪರ್ವೀನ್, ತಹಶೀಲ್ದಾರ್, ಕೆ.ಆರ್.ಪುರಂ, ಬೆಂಗಳೂರು ನಗರ ಜಿಲ್ಲೆ ಇವರನ್ನು ಕೆ.ಸಿ.ಎಸ್. ಸಿಸಿಎ ನಿಯಮ 1957ರ 10(1)(ಡಿ) ಅಡಿಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಅವರ ವಿರುದ್ಧದ ಇಲಾಖಾ ವಿಚಾರಣೆ ಬಾಕಿ ಇರಿಸಿ ಅಮಾನತ್ತಿನಲ್ಲಿರಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ನಿಯಮಾನುಸಾರ ಜೀವನಾಂಶ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಕೆ.ಆರ.ಪುರಂ, ತಹಶೀಲ್ದಾರ್ ಹುದ್ದೆಯಲ್ಲಿ ಶ್ರೀ ಮಹೇಶ್ ಬಾಬು, ಕಛೇರಿ ಸಹಾಯಕರು, ಬೆಂಗಳೂರು ನಗರ ಜಿಲ್ಲಾಧಿಕಾರಿ ಕಛೇರಿ ಇವರನ್ನು ಅಧಿಕ ಪ್ರಭಾರದಲ್ಲಿ ಇರಿಸಲಾಗಿದೆ. ಸದರಿ ಅಧಿಕಾರಿಯು ಈ ಕೂಡಲೇ ಪ್ರಭಾರ ವಹಿಸಿಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1614

**ಎಂ.ಎಸ್. ದೇಸಾಯಿ**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ (ವಿ.ನಿ ಮತ್ತು ಸೇವೆಗಳು)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರ ಗ್ರಾಮದ ಹದ್ದಿನ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಧನ ಪಾವತಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ:ಸನೀಇ 69 ಭೂಸ್ವಾಪ್ರ 2005, ದಿನಾಂಕ 18/05/2005.
2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರ ದಿನಾಂಕ 04/01/10 ಪತ್ರ ಸಂಖ್ಯೆ:ಮುಇಂ/ಸನೀ/ಬಿಜಾಭೂಸ್ವಾಪ್ರ/2009-10/42.

**ಪ್ರಸ್ತಾವನೆ :**

ಮೇಲೆ (2)ರಲ್ಲಿ ಓದಲಾದ ದಿನಾಂಕ 04/01/10ರ ಪತ್ರದಲ್ಲಿ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸದರಿ ಗ್ರಾಮದ ಸ.ನಂ.222/1+2ಎ ರ 3-35 ಎಕರೆ ಜಮೀನಿಗೆ ಮಾನ್ಯ ಉಚ್ಛ ನ್ಯಾಯಾಲಯದ ತೀರ್ಪಿನಂತೆ ಬಾಕಿ ಪರಿಹಾರ ಧನದ ಮೊತ್ತ ಪಾವತಿಸಲು ಹಣ ಬಿಡುಗಡೆಗಾಗಿ ಪ್ರಸ್ತಾವನೆ ಸಲ್ಲಿಸಿದ್ದಾರೆ. ಬಾಕಿ ಪರಿಹಾರ ಧನಕ್ಕೆ ಪ್ರಸ್ತಾಪಿಸಿರುವ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 29/12/1994
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 18/05/1998

ಭೂಸ್ವಾಧೀನಕ್ಕೊಳಪಟ್ಟ ಕಮತನೂರು ಗ್ರಾಮದ ಸ.ನಂ.222/1+2ಎ ರ 3-35 ಎಕರೆ ಜಮೀನಿನ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೆಚ್ಚಿನ ಪರಿಹಾರ ಧನಕ್ಕಾಗಿ ಹುಕ್ಕೇರಿ ಸಿವಿಲ್ ನ್ಯಾಯಾಲಯದ (ಹಿರಿಯ ಶ್ರೇಣಿ) ಇಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣ ಸಂಖ್ಯೆ:166/2001ರಲ್ಲಿ ಮಾನ್ಯ ನ್ಯಾಯಾಲಯವು ಪ್ರತಿ ಎಕರೆಗೆ ರೂ. 2.00 ಲಕ್ಷಗಳಂತೆ ಭೂಮೌಲ್ಯ ನಿಗದಿಪಡಿಸಿ ಈ ಮೊತ್ತದ ಮೇಲೆ ಶಾಸನಬದ್ಧ ಇತರ ಸವಲತ್ತುಗಳನ್ನು ಪಾವತಿಸಲು ದಿನಾಂಕ 17/04/04 ರಂದು ತೀರ್ಪು ನೀಡಿತ್ತು. ಈ ತೀರ್ಪಿನ ವಿರುದ್ಧ ಸರ್ಕಾರದ ಪರವಾಗಿ ಉಚ್ಛ ನ್ಯಾಯಾಲಯದಲ್ಲಿ ಎಂಎಫ್ಎ ಸಂಖ್ಯೆ:7603/04ರಲ್ಲಿ ಮೇಲ್ಮನವಿ ದಾಖಲಿಸಲಾಗಿತ್ತು. ಉಚ್ಛ ನ್ಯಾಯಾಲಯವು ನೀಡಿರುವ ಮಧ್ಯಂತರ ಆದೇಶದಂತೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಲೆಕ್ಕ ಹಾಕಿದ ಪರಿಹಾರ ಧನದ ಶೇ. 50ರಷ್ಟು ಅಂದರೆ ರೂ. 9,02,822-00ಗಳನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿತ್ತು.

ಪ್ರಸುತ ಉಚ್ಛ ನ್ಯಾಯಾಲಯವು ಎಂ.ಎಫ್.ಎ. ಪ್ರಕರಣ ಸಂಖ್ಯೆ:7603/04ರಲ್ಲಿ ದಿನಾಂಕ 20/11/08ರಂದು ಅಂತಿಮ ಆದೇಶ ಹೊರಡಿಸಿದೆ. ಈ ಆದೇಶದಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆಗೆ ನಿಗದಿಪಡಿಸಿದ್ದ ರೂ. 2.00 ಲಕ್ಷಗಳಿಂದ ರೂ. 1,90,000/-ಗಳಿಗೆ ಕಡಿಮೆ ಮಾಡಿ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ತಿಳಿಸಲಾಗಿದೆ.

ಉಚ್ಛ ನ್ಯಾಯಾಲಯದ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯ ಪತ್ರ ಸಂಖ್ಯೆ:ಲಾ 742 ಎಲ್‌ಬಿಎಸ್ 2009, ದಿನಾಂಕ 07/05/2009ರಲ್ಲಿ ಅಭಿಪ್ರಾಯ ನೀಡಿದೆ. ಹೀಗಾಗಿ ಉಚ್ಛ ನ್ಯಾಯಾಲಯದ ತೀರ್ಪಿನಂತೆ ಪ್ರಕರಣಕ್ಕೆ ಹಣ ಪಾವತಿಸಲು ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 20 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 19ನೇ ಜೂನ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕಮತನೂರು ಗ್ರಾಮಕ್ಕೆ ಸೇರಿದ ಸರ್ವೆ ನಂಬರ್ 222/1+2ಎ ರ ಒಟ್ಟು 3 ಎಕರೆ 35 ಗುಂಟೆ ಜಮೀನಿಗೆ ಉಚ್ಛ ನ್ಯಾಯಾಲಯದ ತೀರ್ಪಿನಂತೆ ಪಾವತಿಸಬೇಕಾದ ಪರಿಹಾರ ಧನದ ಬಾಕಿ ಮೊತ್ತ ರೂ. 18,03,801-00ಗಳನ್ನು (ಹದಿನೆಂಟು ಲಕ್ಷದ ಮೂರು ಸಾವಿರದ ಎಂಟು ನೂರ ಒಂದು ರೂ.ಗಳು ಮಾತ್ರ) ಭೂಮಾಲೀಕರಿಗೆ ಪಾವತಿಸುವ ಸಲುವಾಗಿ ನ್ಯಾಯಾಲಯದಲ್ಲಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1615

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಸಿ.ವಿ. ಆನಂದ ತೀರ್ಥರಾವ, ಎ.ಎಸ್.ಐ., (ವೈರ್‌ಲೆಸ್) ಡಿ.ಜಿ. ಮತ್ತು ಐ.ಜಿ.ಪಿ. ಕಛೇರಿ ಕಂಟ್ರೋಲ್ ರೂಂ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ವೈರ್‌ಲೆಸ್, ಬೆಂಗಳೂರು, ಇವರ ಆದೇಶ ಸಂಖ್ಯೆ : ಪನ್‌ಸಿಅರ್:12/2007–08 ಓ.ಬಿ: 205/08 ದಿ : 07–03–08
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್, ವೈರ್‌ಲೆಸ್, ಬೆಂಗಳೂರು, ಇವರ ಹಿಂಬರಹ ಸಂಖ್ಯೆ : ಪನ್‌ಸಿಆರ್/12/2007–08 ದಿನಾಂಕ : 26–11–08
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ : 08–9–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)41/2009–10 ದಿನಾಂಕ : 20–02–2010

* * *

**ಪ್ರಸ್ತಾವನೆ :**

ಶ್ರೀ ಸಿ.ವಿ. ಆನಂದ ತೀರ್ಥರಾವ, ಎ.ಎಸ್.ಐ., (ವೈರ್‌ಲೆಸ್) ಇವರು ಡಿ.ಜಿ. ಮತ್ತು ಐ.ಜಿ.ಪಿ.ರವರ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಕರ್ತವ್ಯಕ್ಕೆ ತಡವಾಗಿ ಬರುವುದೂ ಅಲ್ಲದೆ ಮೇಲಾಧಿಕಾರಿಗಳೊಂದಿಗೆ ಅಗೌರವದಿಂದ ನಡೆದುಕೊಂಡು ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ವೈರ್‌ಲೆಸ್, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 07–03–2008ರ ಅದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರು ಮೇಲ್ಮನವಿಯನ್ನು ಪರಿಶೀಲಿಸಿ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ವೈರ್‌ಲೆಸ್ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2) ರಲ್ಲಿ ಓದಲಾದ ದಿನಾಂಕ : 26–11–08ರ ಹಿಂಬರಹದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಅದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಅದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 161 ಪೊಸಿಅ 2009, ಬೆಂಗಳೂರು, ದಿನಾಂಕ : 22ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ವಿ. ಆನಂದ ತೀರ್ಥರಾವ, ಎ.ಎಸ್.ಐ., (ವೈರ್‌ಲೆಸ್) ಡಿ.ಜಿ. ಮತ್ತು ಐ.ಜಿ.ಪಿ.ರವರ ನಿಯಂತ್ರಣ ಕೊಠಡಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1636

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ದತ್ತಾತ್ರೇಯ, ಪಿ.ಎಸ್.ಐ., ಟ್ರಾಫಿಕ್ ಪೊಲೀಸ್ ಠಾಣೆ, ಬಳ್ಳಾರಿ ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರ ಆದೇಶ ಸಂಖ್ಯೆ : ಸಿಬ್ಬಂದಿ(3)ಪಿಆರ್/77/2008 ಓ.ಬಿ. ಸಂ : 939/2008 ದಿನಾಂಕ : 24–10–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ : ಅಪೀಲು/72/ಈವ/2008 ಅ.ಪು.ಸಂ : 146/ಈವ/09 ದಿನಾಂಕ : 21–02–2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ : 20–10–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)55/2009–10 ದಿನಾಂಕ : 05–01–2010
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 16 ಸಿಎನ್‌ಎಸ್ 10 ದಿನಾಂಕ : 09–6–2010

**ಪ್ರಸ್ತಾವನೆ :**

ಶ್ರೀ ದತ್ತಾತ್ರೇಯ, ಪಿ.ಎಸ್.ಐ., ಇವರು ಹಟ್ಟಿ ಪೊಲೀಸ್ ಠಾಣೆಯಲ್ಲಿ, ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

1. ಠಾಣೆಯ ಅಪರಾಧ ರಜೀಷ್ಟರನ್ನು ಪರಿಶೀಲಿಸಲಾಗಿ ನಿರ್ವಹಿಸಲಾಗಿದೆ ಆದರೆ ಪಿ.ಎಸ್.ಐ.ರವರು ಸದರಿ ಅಪರಾಧ ರಿಜಿಸ್ಟರನ್ನು ಬರೆಯದೇ ಸಿಪಿಸಿ/ಸಿಎಚ್‌ಸಿ ರವರಿಂದ ಬರಸಿದ್ದು ಕಂಡು ಬಂದಿದೆ. ಠಾಣೆಯ ಕೊನೆ ಗುನ್ನೆ ನಂ. 101/08 ದಾಖಲಾಗಿದ್ದು, ಆದರೆ ಅಪರಾಧ ರಜೀಸ್ಟರನ್ನು ಗುನ್ನೆ ನಂ. 99/08ರ ವರೆಗೆ ಮಾತ್ರ ಬರೆಯಲಾಗಿದೆ. ಸದರಿ ರಿಜಿಸ್ಟರನ ಎಲ್ಲಾ ಕಾಲಂಗಳನ್ನು ಭರ್ತಿ ಮಾಡಿರುವುದಿಲ್ಲ. ಗುನ್ನೆ ನಂ. 99/08 ನೇದ್ದರ ಬಗ್ಗ ಪಿಎಸ್‌ಐ. ರವರನ್ನು ಕೇಳಲಾಗಿ ಪ್ರಕರಣದ ಮಾಹಿತಿ ಅವರಿಗೆ ಗೊತ್ತಿರುವುದಿಲ್ಲ. ಅವರು ಅಪರಾಧ ರಿಜಿಸ್ಟರನ್ನು ಸ್ವತಃ ಬರೆದಿದ್ದರೆ ಈ ಪ್ರಕರಣದ ಮಾಹಿತಿ ಇರುತ್ತಿತ್ತು.
2. ಅಪರಾಧ ರಜೀಸ್ಟರನ್ನು ಗುನ್ನೆ ನಂ. 84/08 ನೇದ್ದರಲ್ಲಿ ದೋಷಾರೋಪಣೆ ಸಲ್ಲಿಸಿ ಸಿ.ಸಿ.ನಂ : 436/08 ಅಂತಾ ನಮೂದಿಸಿದ್ದು ಆದರೆ ಯಾವುದೇ ಸಿ.ಡಿ.ಗಳ ಬಗ್ಗೆ ನೊಂದಣಿ ಇರುವುದಿಲ್ಲ.
3. ಕ್ವಾಟರಲಿ ಕ್ರೈಂ ಅಬಸ್ಟ್ರಾಕ ನಿರ್ವಹಿಸಲಾಗಿದ್ದು, ಪರಿಪೂರ್ಣವಾಗಿ ಬರೆದಿರುವುದಿಲ್ಲ. ಈ ರಜೀಸ್ಟರನ್ನು ಬರಹಗಾರರು ಬರೆದಿದ್ದು ಅದಕ್ಕೆ ಪಿ.ಎಸ್.ಐ. ರವರು ಸಹಿ ಮಾಡಿರುವುದಿಲ್ಲ.
4. ಶ್ರೀ ಮಹೇಬೂಬ ರೌಡಿ ರಜೀಸ್ಟರನ್ನು ಪರಿಶೀಲಿಸಲಾಗಿ ಇವನನ್ನು ನನ್ನ ಸೂಚನೆ ಮೇರೆಗೆ ಸಿಪಿಐ ರವರು ಮಟಕಾ ಪ್ರಕರಣದಲ್ಲಿ ದಸ್ತಗಿರಿ ಮಾಡಿದ್ದಾರೆ. ಆದರೆ ಈ ಬಗ್ಗೆ ಸದರಿ ರಜೀಸ್ಟರನಲ್ಲಿ ದಾಖಲೆ ಮಾಡಿಲ್ಲ.
5. ಅರ್ಜಿ ರಜೀಸ್ಟರನ್ನು ಪರಿಶೀಲಿಸಲಾಗಿ ವಿಲೇವಾರಿಯ ಬಗ್ಗ ನೊಂದಣಿ ಮಾಡಿಲ್ಲ.
6. ಮೇಲಾಧಿಕಾರಿಗಳಿಂದ ಹಟ್ಟಿ ಪೊಲೀಸ್ ಠಾಣೆಗೆ ಬಂದ ಸುತ್ತೋಲೆಗಳನ್ನು ಸರಿಯಾಗಿ ಸುತ್ತೋಲೆ ಕಡತದಲ್ಲಿ ಇರಿಸಿಲ್ಲ.
7. ಎನ್.ಸಿ. ರಜೀಸ್ಟರನ್ನು ನಿರ್ವಹಿಸಿರುವುದಿಲ್ಲ.
8. ಅರ್ಜಿದಾರರಿಗೆ ನೀಡಬೇಕಾದ ಫಾರಂ ನಂ. 76(ಎ) ಪರಿಶೀಲಿಸಲಾಗಿ ಇಲ್ಲಿಯವರೆಗೆ ಕೇವಲ (4) ಜನರಿಗೆ ಮಾತ್ರ ಸ್ವೀಕೃತಿ ನೀಡಲಾಗಿದೆ.
9. ಯು.ಡಿ.ಆರ್. ರಿಜೀಸ್ಟರನ್ನು ಪರಿಶೀಲಿಸಲಾಗಿ ಯು.ಡಿ.ಆರ್. ನಂ. 02,04, 09,12,13,16,17/2008 ಇವುಗಳನ್ನು ಮಾತ್ರ ಪಿ.ಎಸ್.ಐ. ರವರು ತನಿಖೆ ಮಾಡಿದ್ದಾರೆ. ಇನ್ನಿತರ ಯು.ಡಿ.ಆರ್. ನಂ. 01,03,05,06, 07, 08,10,14, 15/2008 ಇವುಗಳನ್ನು ಎ.ಎಸ್.ಐ. ಹಾಗೂ ಸಿಎಚ್‌ಸಿ ರವರು ತನಿಖೆ ಮಾಡಿದ್ದು ಕಂಡು ಬರುತ್ತದೆ.ಯು.ಡಿ.ಆರ್. ಪ್ರಕರಣಗಳು ಮಹತ್ವದಾಗಿದ್ದು ಇವುಗಳಲ್ಲಿ ಪಿ.ಎಸ್.ಐ. ರವರು ತನಿಖೆ ಮಾಡುವಲ್ಲಿ ವಿಫಲರಾಗಿದ್ದಾರೆ. ಯು.ಡಿ.ಆರ್. ನಂ. 13/08 ರಲ್ಲಿ ಮೃತ ಶಿವಲೀಲಾ ಇವಳ ಫೋಟೋಗಳು ಕಡತದಲ್ಲಿ ಕಂಡು ಬರುತ್ತಿಲ್ಲ.
10. ಯು.ಡಿ.ಆರ್. ನಂ. 03/08 ಕಲಂ 174 ಸಿ.ಆರ್.ಪಿ.ಸಿ. ನೇದ್ದರಲ್ಲಿ ದೇವಮ್ಮ ಗಂಡ ಭಾಗಪ್ಪ ಹಾಗೂ ಅಮರೇಶರವರು : 4 ವರ್ಷ ಇವರು ನೀರಿನಲ್ಲಿ ಮುಳುಗಿ ಸತ್ತಿದ್ದಾರೆ. ಆದರೆ ಈ ಕಡತವನ್ನು ಪರಿಶೀಲಿಸಲಾಗಿ ಅಮರೇಶರವರು ಆಕಸ್ಮಿಕವಾಗಿ ಬಾವಿಯಲ್ಲಿ ಬಿದ್ದಿದ್ದು ಅವರನ್ನು ಉಳಿಸಲು ಪ್ರಯತ್ನ ಮಾಡುವಾಗ ದೇವಮ್ಮ ಸಹ ಮುಳುಗಿದ್ದಾರೆ ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ತನಿಖಾಧಿಕಾರಿಗಳು ಸಂಗ್ರಹಿಸಿಲ್ಲ.
11. ಗುನ್ನೆ ನಂ. 44/08 ಕಲಂ 279, 338, ಪರಿಶೀಲಿಸಲಾಗಿ ಗಾಯದ ಪ್ರಮಾಣ ಪತ್ರ ಹಾಗೂ ಎಮ್.ವಿ.ಐ. ರವರ ಪ್ರಮಾಣ ಪತ್ರಕ್ಕಾಗಿ ಬಾಕಿ ಇದೆ ಹಾಗೂ ಕೊನೆಯದಾಗಿ ಸಿ.ಡಿ. ದಿನಾಂಕ : 27–05–2008 ಬರೆಯಲಾಗಿದೆ. ಈ ದಾಖಲೆಗಳನ್ನು ಪಡೆಯಲು ಯಾವುದೇ ಪ್ರಯತ್ನ ಮಾಡಿದ್ದು ಕಂಡು ಬಂದಿರುವುದಿಲ್ಲ.
12. ಗುನ್ನೆ ನಂ. 16/08 ಕಲಂ 325, 504 ಐಪಿಸಿ ಪರಿಶೀಲಿಸಲಾಗಿ ಗಾಯದ ಪ್ರಮಾಣ ಪತ್ರಕ್ಕೆ ಬಾಕಿ ಇದೆ. ಇದನ್ನು ಪಡೆಯಲು ಯಾವುದೇ ಪ್ರಯತ್ನ ಮಾಡಿದ್ದು ಕಂಡು ಬಂದಿರುವುದಿಲ್ಲ.
13. ಹಟ್ಟಿ ಪೊಲೀಸ್ ಠಾಣೆಯಲ್ಲಿ ಈವರೆಗೆ 24 ಅಪಘಾತ ಪ್ರಕರಣಗಳು (ಘರವಲ್ಲದ) ದಾಖಲಾಗಿದ್ದು ಗುನ್ನೆ ನಂ : 01, 04, 05, 09, 10, 15, 26, 27, 29, 31, 44, 47, 51, 68, 73, 75, 76, 78, 79, 81, 88, 96, 97, 99/2008 ದಾಖಲಾಗಿದ್ದು, ಈ ಪ್ರಕರಣಗಳಲ್ಲಿ ಪರಿಹಾರ ಪಡೆಯಲು ನೊಂದವರಿಗೆ ಯಾವುದೇ ಕ್ಲೆಮ್ ಫಾರ್ಮಗಳನ್ನು ಕೊಟ್ಟಿರುವುದಿಲ್ಲ.

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 24–10–2008ರ ಅದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ. ದಿನಾಂಕ : 16–08–2008 ರಿಂದ 08–09–2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ : (2) ರಲ್ಲಿ ಓದಲಾದ ದಿನಾಂಕ : 21–02–2009ರಲ್ಲಿ ಆದೇಶಿಸಿದ್ದಾರೆ. ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೆಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯನ್ನು ಅರೋಪಕ್ಕೆ ಅನುಗುಣವಾಗಿರುವುದಿಲ್ಲವೆಂದು ಸರ್ಕಾರವು ಪರಿಗಣಿಸಿ ಮೇಲ್ಮನವಿ ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ತೀರ್ಮಾನಿಸಿ ಓದಲಾದ (5) ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಅದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 196 ಪೊಸಿಅ 2009, ಬೆಂಗಳೂರು, ದಿನಾಂಕ : 22ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ದತ್ತಾತ್ರೇಯ, ಪಿ.ಎಸ್.ಐ., ಟ್ರಾಫಿಕ್ ಪೊಲೀಸ್ ಠಾಣೆ, ಬಳ್ಳಾರಿ ನಗರ, ಇವರ ಮೇಲ್ಮನವಿ ಪ್ರಾಧಿಕಾರದ ದಿನಾಂಕ : 21-02-2009 ಆದೇಶವನ್ನು ಮಾರ್ಪಡಿಸಿ ಅರ್ಜಿದಾರರಿಗೆ "ವಾಗ್ದಂಡನೆ"ಯನ್ನು ವಿಧಿಸಲಾಗಿದೆ ದಿನಾಂಕ : 16-08-2008 ರಿಂದ 08-09-2008ರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1637

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಸೈಯದ್ ನಿಜಾಮುದ್ದೀನ್, ಪಿ.ಐ., ರಾಜ್ಯ ಗುಪ್ತವಾರ್ತೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು ಬೆಂಗಳೂರು, ನಗರ ಇವರ ಆದೇಶ ಸಂಖ್ಯೆ : ಡಿಇ(2)ಆರ್7/ಸಿಓಪಿ/75-07 ದಿನಾಂಕ : 15-03-2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಅದೇಶ ಸಂಖ್ಯೆ : ಸಿಬಿ(8)41/2008-09 ದಿನಾಂಕ : 01-09-2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ : 30-12-09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(8)41/2008-09 ದಿನಾಂಕ : 13-4-2010

**ಪ್ರಸ್ತಾವನೆ :**

ಶ್ರೀ ಸೈಯದ್ ನಿಜಾಮುದ್ದೀನ್, ಪಿ.ಐ., ಇವರು ಡಿ.ಜಿ. ಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತನ ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

> "ಶ್ರೀ ಸೈಯದ್ ನಿಜಾಮುದ್ದೀನ್, ಪಿ.ಐ., ಇವರು ಡಿ.ಜಿ. ಹಳ್ಳಿ ಪೊಲೀಸ್ ಠಾಣೆ (ಹಾಲಿ ಹೆಚ್ ಅಂಡ್ ಬಿ ದಳ, ಸಿ.ಸಿ.ಬಿ.) ಬೆಂಗಳೂರು ನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀ ಹರ್‌ಪ್ರೀತ್ ಖುರಾನಾ, ಶ್ರೀಮತಿ ತಾಜ್‌ಮಿತ್ ಖುರಾನಾ ಹಾಗೂ ಶ್ರೀಮತಿ ರವೀಂದ್ರ ಕೌರ್ ಇವರುಗಳು ಸಲ್ಲಿಸಿದ್ದ ಪಾಸ್‌ಪೋರ್ಟ್ ಅರ್ಜಿಗಳನ್ನು ತಮ್ಮ ಪೊಲೀಸ್ ಠಾಣೆಗೆ ವಿಚಾರಣೆಗಾಗಿ ಕಳುಹಿಸಲಾಗಿತ್ತು. ಸದರಿ ಎಲ್ಲಾ ಪಾಸ್‌ಪೋರ್ಟ್ ದಾಖಲೆಗಳನ್ನು ಶ್ರೀ. ಪಿ. ಮಲ್ಲೇಶಪ್ಪ, ಎಚ್.ಸಿ-2468 ರವರು ವಿಚಾರಣೆ ಮಾಡಿ ಅರ್ಜಿದಾರರನ್ನು ತಾವೇ ಗುರ್ತಿಸಿ ತಮ್ಮ ಸಹಿಯನ್ನು ಪಾಸ್‌ಪೋರ್ಟ್ ಅರ್ಜಿಗಳಲ್ಲಿ ಮಾಡಿ ನಂತರ ಅರ್ಜಿಗಳನ್ನು ಮೇಲಾಧಿಕಾರಿಯಾದ ತಮಗೆ ಸಹಿಗಾಗಿ ಇಟ್ಟಿರುತ್ತಾರೆ. ಠಾಣಾಧಿಕಾರಿಯಾದ ನೀವು ಸದರಿ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸದೇ ನಕಲಿ ದಾಖಲಾತಿಗಳನ್ನು ಹೊಂದಿದ ಆ ಪಾಸ್‌ಪೋರ್ಟ್ ಅರ್ಜಿಗಳನ್ನು ಪುರಸ್ಕರಿಸಿ ತಮ್ಮ ಸಹಿಯನ್ನು ಹಾಕಿ ಪೊಲೀಸ್ ಕಮೀಷನರ್ ರವರ ಕಛೇರಿಗೆ ಕಳುಹಿಸಿರುತ್ತೀರಿ. ಈ ಬಗ್ಗೆ ನಕಲಿ ದಾಖಲೆಗಳನ್ನು ನೀಡಿ ಪಾಸ್‌ಪೋರ್ಟ್ ಹೊಂದಿದ್ದ ಪಾಸ್‌ಪೋರ್ಟ್‌ದಾರರು ಮುಂಬೈನಿಂದ ಪ್ಯಾರೀಸ್‌ಗೆ ಪ್ರಯಾಣಿಸುವ ಸಂದರ್ಭದಲ್ಲಿ ಸದರಿರವರುಗಳ ಪಾಸ್ ಪೋರ್ಟ್‌ಗಳ ನಕಲಿ ವಿಳಾಸ ಹಾಗೂ ದಾಖಲಾತಿಗಳನ್ನು ನೀಡಿ ಪಡೆದುಕೊಂಡಿರುವುದಾಗಿ ಕಂಡುಬಂದಿರುತ್ತದೆ. ನೀವು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ಬೇಜವಾಬ್ದಾರಿತನ ಹಾಗೂ ತೀವ್ರತರ ಕರ್ತವ್ಯಲೋಪವೆಸಗಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 15-03-2008ರ ಅದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 01-09-2009 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೆಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಅದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 7 ಪೊಸಿಅ 2010, ಬೆಂಗಳೂರು, ದಿನಾಂಕ : 22ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಸೈಯದ್ ನಿಜಾಮುದ್ದೀನ್, ಪಿ.ಐ., ರಾಜ್ಯ ಗುಪ್ತವಾರ್ತೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1638

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಿ.ಡಿ. ಪೂವಪ್ಪ, ಹೆಚ್. ಸಿ.–157, ಕುಶಾಲನಗರ ವೃತ್ತ, ಕೊಡಗು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಇವರ ಆದೇಶ ಸಂಖ್ಯೆ : ಡಿಇ/05/08–09 ಓ.ಬಿ : 115/08–09 ದಿನಾಂಕ : 09–03–2009
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ : ಅಪೀಲು/17/2009–10 ಓ.ಬಿ.ಸಂ : 35/2009–10 ದಿ: 20–10–2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ : 27–01–10
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)77/2009–10 ದಿನಾಂಕ : 24–3–10

**ಪ್ರಸ್ತಾವನೆ :**

ಶ್ರೀ ಬಿ.ಡಿ. ಪೂವಪ್ಪ, ಹೆಚ್. ಸಿ.–157, ಇವರು ಸುಂಟಿಕೊಪ್ಪ[ ಪೊಲೀಸ್ ಠಾಣೆಯಲ್ಲಿ, ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ತೀವ್ರ ತರಹದ ಕರ್ತವ್ಯಲೋಪ ಎಸಗಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಶ್ರೀ ಬಿ.ಡಿ. ಪೂವಪ್ಪ, ಹೆಚ್. ಸಿ.–157, ಆದ ನೀವು ಸುಂಟಿಕೊಪ್ಪ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಸುಂಟಿಕೊಪ್ಪ ಪೊಲೀಸ್ ಠಾಣೆಯಲ್ಲಿ ಮೊ.ಸಂ. 81/2007 ಕಲಂ 104(ಎ) ಕೆಎಫ್ ಆಕ್ಟ್ ಮತ್ತು 379, ಐಪಿಸಿ ಪ್ರಕರಣದಲ್ಲಿ ತನಿಖಾದಿಕಾರಿಯವರಿಗೆ ತನಿಖಾ ಸಹಾಯಕರಾಗಿ ಕರ್ತವ್ಯ ನಿರ್ವಹಿಸಿದ್ದು, ಈ ಪ್ರಕರಣದಲ್ಲಿ 5 ಜನ ಆರೋಪಿತರು ಮಾತ್ರ ಬೀಟೆ ಮರ ಕಳ್ಳತನದಲ್ಲಿ ಭಾಗಿಯಾಗಿದ್ದರೂ, ಉದ್ದೇಶಪೂರ್ವಕವಾಗಿ ಮತ್ತೋರ್ವ ಆರೋಪಿ ಬಾಪುಟ್ಟಿಯ ಕುಮ್ಮಕಿನಿಂದ ಪೊಲೀಸರೊಂದಿಗೆ ಉತ್ತಮ ಬಾಂದವ್ಯವನ್ನು ಹೊಂದಿರುವ ಬಾತ್ಮಿದಾರ ಸಂಶು @ ಸಂಶೂದ್ದೀನ್‌ರವರನ್ನು ಆರೋಪಿ ಸಂಖ್ಯೆ 6 ಎಂಬುದಾಗಿ ಪ್ರಕರಣದ ತನಿಖಾಧಿಕಾರಿಯಾಗಿದ್ದ ಶ್ರೀ ರಾಮರೆಡ್ಡಿ, ಪಿ.ಎಸ್.ಐ. ರವರ ಸಹಿಯನ್ನು ದಾಖಲಾತಿಗಳಿಗೆ ಪಡೆದುಕೊಂಡ ನಂತರ ಅವರಿಗೆ ತಿಳಿಯದಂತೆ ಸೇರ್ಪಡೆಗೊಳಿಸಿ ಕರ್ತವ್ಯದಲ್ಲಿ ತೀವ್ರ ಕರ್ತವ್ಯಲೋಪ ತೋರಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ಅರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 09–03–2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಬಾಧಕವಾಗುವಂತೆ ಒಂದು ವರ್ಷಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ದಿನಾಂಕ : 25–06–08 ರಿಂದ 02–12–08ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 20–10–2009 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಅದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 22 ಪೊಸಿಅ 2010, ಬೆಂಗಳೂರು, ದಿನಾಂಕ : 19ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಡಿ. ಪೂವಪ್ಪ, ಹೆಚ್. ಸಿ.–157, ಕುಶಾಲನಗರ ಪೊಲೀಸ್ ಠಾಣೆ, ಕುಶಾಲನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1639

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಸಿದ್ಧರಾಜು ಸಿ.ಹೆಚ್.ಸಿ.–84, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ** :

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ : ಸಿಬ್ಬಂದಿ(2)ಪಿಆರ್/82/2008–09 ಓ.ಬಿ. ಸಂ: 50/09–10 ದಿನಾಂಕ : 27–5–09
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ : ಅಪೀಲು/29/2009–10 ಓ.ಬಿ.ಸಂ : 29/2009–10 ದಿ: 19–08–2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ : 24–12–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)75/2009–10 ದಿನಾಂಕ : 22–3–10

**ಪ್ರಸ್ತಾವನೆ :**

ಶ್ರೀ ಸಿದ್ಧರಾಜು ಸಿ.ಹೆಚ್.ಸಿ.–84, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಬೇಜವಾಬ್ದಾರಿತನ ಮತ್ತು ನಿರ್ಲಕ್ಷತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

ಶ್ರೀ ಸಿದ್ಧರಾಜು ಸಿ.ಹೆಚ್.ಸಿ.–84, ಶ್ರೀರಂಗಪಟ್ಟಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ : 01–5–2007ರಂದು ಬೆಳಿಗ್ಗೆ 10–30 ಗಂಟೆಯಿಂದ ಸಂಜೆ 5–30 ಗಂಟೆಯವರೆಗೆ ಠಾಣಾ ಪ್ರಭಾರದಲ್ಲಿದ್ದಾಗ ದಿನಾಂಕ : 01–05–2007 ರಂದು ಬೆಳಿಗ್ಗೆ 9–45 ಗಂಟೆ ಸಮಯದಲ್ಲಿ ಪಿರ್‍ಯಾದಿ ಶ್ರೀ ಸಿ. ಶಿವಶಂಕರ, ಅಡ್ವೋಕೇಟ್, ಆಂಧ್ರಪ್ರದೇಶ ಮತ್ತು ತಮ್ಮ ಕುಟುಂಬ ವರ್ಗದವರು ಹಾಗೂ ಅಣ್ಣ ಮತ್ತು ಅಣ್ಣನ ಹೆಂಡತಿ ಮತ್ತು ತಾಯಿಯವರೊಂದಿಗೆ ಶ್ರೀರಂಗಪಟ್ಟಣ ಠಾಣಾ ಸರಹದ್ದಿನ ಸಂಗಮಕ್ಕೆ ಬಂದಾಗ, ಸಂಗಮದಲ್ಲಿ ತೆಪ್ಪ (ಬೋಟ್) ನಡೆಸುವವನು ಬನ್ನಿ ತೆಪ್ಪವನ್ನು ಬಾಡಿಗೆಗೆ ಪಡೆದು ತೆಪ್ಪದಲ್ಲಿ ವಿಹರಿಸಿ ಅಂತ ಹೇಳಿದಾಗ, ಪಿರ್‍ಯಾದಿರವರು ಸಣ್ಣ ಮಕ್ಕಳಿದ್ದಾರೆಂದು ನಿರಾಕರಿಸಿ ನೀರನ್ನು ಮುಟ್ಟಿ ಪ್ರೋಕ್ಷಿಸಿಕೊಳ್ಳುವಾಗ ಬೋಟ್ ಮ್ಯಾನ್ ನೀರು ಮುಟ್ಟಬೇಡಿ ಇದೆಲ್ಲ ನನಗೆ ಸೇರಿದ್ದು ಎನ್ನುತ್ತಾ ಅವಾಚ್ಯ ಶಬ್ದಗಳಿಂದ ಬೈದದ್ದನ್ನು ಪಿರ್‍ಯಾದಿಯವರ ಅಣ್ಣ ಕೇಳಿದ್ದಕ್ಕೆ ತೆಪ್ಪ ನಡೆಸುವವನು, ತೆಪ್ಪ ನಡೆಸುವವನ ಸಹಾಯಕ ಹಾಗೂ ಎಳನೀರು ಮಾರಾಟ ಮಾಡುವವನು ಹಾಗೂ ಇತರರು ಸೇರಿ ವಿನಾಕಾರಣ ಜಗಳ ತೆಗೆದು ದೊಣ್ಣೆಯಿಂದ ಮತ್ತು ಎಳನೀರು ಕೊಚ್ಚುವ ಮಚ್ಚಿನಿಂದ ಹಲ್ಲೆ ಮಾಡಿದ್ದು, ಈ ಸಂಬಂಧ ಗಾಯಾಳುಗಳು ದೂರನ್ನು ನೀಡಲು ಬಂದಾಗ ಆ ಸಮಯದಲ್ಲಿ ಸಿ.ಎಚ್.ಸಿ.–84 ಆದ ನೀವು ಶ್ರೀರಂಗಪಟ್ಟಣ ಠಾಣೆಯ ಪ್ರಭಾರದಲ್ಲಿದ್ದು (ಮೊ.ಸಂ : 225/07 ಕಲಂ 143, 341, 323,324, 504, 506 379 ಕೂಡ 149 ಐಪಿಸಿ ಪ್ರಕರಣದ) ಪಿರ್‍ಯಾದಿ ಶ್ರೀ ಶಿವಶಂಕರ ಮತ್ತು ಅವರ ಕುಟುಂಬ ಸದಸ್ಯರು/ಗಾಯಾಳುಗಳು ಘಟನೆಯ ಬಗ್ಗೆ ದೂರು ನೀಡಲು ರಕ್ಷಣೆಯನ್ನು ಅಪೇಕ್ಷಿಸಿ ಹಾಗೂ ನ್ಯಾಯಾ ಕೋರಿ ಠಾಣೆಗೆ ಬಂದವರಿಗೆ ನೀವು ಸಾಂತ್ವನ ಹೇಳಿ ಘಟನೆ ಬಗ್ಗೆ ಪಿರ್‍ಯಾದು ಪಡೆದು ಗಾಯಾಳುಗಳನ್ನು ಮೆಮೋ ಪತ್ರದೊಂದಿಗೆ ಸಿಬ್ಬಂದಿಯವರೊಂದಿಗೆ ಸರ್ಕಾರಿ ಆಸ್ಪತ್ರೆಗೆ ವೈದ್ಯಕೀಯ ತಪಾಸಣೆಗೆ ಒಳಪಡಿಸಿ ಪ್ರಕರಣದಲ್ಲಿ ತ್ವರಿತ ತನಿಖೆಯನ್ನು ಕೈಗೊಳ್ಳದೆ ಬೇಜವಾಬ್ದಾರಿತನದಿಂದ ನೊಂದ ಗಾಯಾಳುಗಳಾದ ಆಂಧ್ರಪ್ರದೇಶದ ಪ್ರವಾಸಿಗರನ್ನು ಆಸ್ಪತ್ರೆಗೆ ಹೋಗಿ ಎಂದು ಉಡಾಫೆಯಿಂದ ಹೇಳಿಕಳುಹಿಸುವುದರ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಮತ್ತು ನಿರ್ಲಕ್ಷತೆಯನ್ನು ತೋರಿರುತ್ತೀರಿ.”

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 27–05–2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷದ ಕಾಲ ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 19–08–2009 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಅದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 6 ಪೊಸಿಅ 2010, ಬೆಂಗಳೂರು, ದಿನಾಂಕ : 19ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿದ್ಧರಾಜು ಸಿ.ಹೆಚ್.ಸಿ.–84, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1640

**ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ :** ಡಾ: ಪಿ. ರಾಜಶೇಖರನ್, ಉಪ ಅರಣ್ಯ ಸಂರಕ್ಷಣಾಧಿಕಾರಿ, ಜಾಗೃತ ದಳ, ಬಳ್ಳಾರಿ ಇವರ ವಿರುದ್ಧ ದಾಖಲಾಗಿರುವ ಅಕ್ರಮ ಆಸ್ತಿ ಹೊಂದಿರುವ ಪ್ರಕರಣದಲ್ಲಿ ಅಭಿಯೋಜನೆ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :**

1) ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುತ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್, ಐಎನ್‌ವಿ : (ಜಿ) ಸಿಟಿಎಲ್–6 : ಸಿಆರ್–2 : 2009, ಹೊಸಪೇಟೆ, ದಿನಾಂಕ : 8–02–2010.
2) ಕರ್ನಾಟಕ ಲೋಕಾಯುಕ್ತ ಪೋಲೀಸ್ ವಿಭಾಗದ ತನಿಖಾಧಿಕಾರಿಯವರ ವರದಿ
3) ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನ ಪಂಚನಾಮೆಗಳು, ಸಾಕ್ಷಿದಾರರ ಹೇಳಿಕೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.

**ಪ್ರಸ್ತಾವನೆ:**

ಡಾ: ಪಿ. ರಾಜಶೇಖರನ್, ಉಪ ಅರಣ್ಯ ಸಂರಕ್ಷಣಾಧಿಕಾರಿ, ಇವರು ಬಳ್ಳಾರಿ ಜಿಲ್ಲೆಯ ಅರಣ್ಯ ಜಾಗೃತ ದಳದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಇವರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವ ಬಗ್ಗೆ ವಿಶ್ವಾಸಾರ್ಹ ಮಾಹಿತಿಯ ಮೇರೆಗೆ ಸದರಿಯವರ ವಿರುದ್ಧ ಬೆಂಗಳೂರು ಗ್ರಾಮಾಂತರ ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 5/2008 ನ್ನು ದಿನಾಂಕ : 29–01–2008 ರಂದು ಲಂಚ ನಿರೋಧಕ ಅಧಿನಿಯಮ 1988ರ ಕಲಂ 13 (1) (ಇ) ಜೊತೆಗೆ 13(2)ರ ಪ್ರಕಾರ ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿದ್ದು, (ಬೆಂಗಳೂರು ಗ್ರಾಮಾಂತರ ಲೋಕಾಯುಕ್ತ ಠಾಣೆ 5/2008ನ್ನು ಮಾನ್ಯ ಜಿಲ್ಲಾ ವಿಶೇಷ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ಆದೇಶದಂತೆ ಸರಹದ್ದಿನ (ರಿಣಡಿಜುಖಿಣುಅಟ) ಆಧಾರದ ಮೇಲೆ ಪ್ರಕರಣವನ್ನು ಹೊಸಪೇಟೆ ಲೋಕಾಯುಕ್ತ ಠಾಣೆ ಮೊಕದ್ದಮೆ ನಂ. 2/2009 ರಲ್ಲಿ ಮರು ದಾಖಲಿಸಿದೆ). ಈ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲೆಗಳ ಪ್ರತಿಗಳನ್ನು ಅಪರ ಪೋಲೀಸ್ ಮಹಾ ನಿರ್ದೇಶಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರ.ಸಂ. (1)ರ ಪತ್ರದ ಮೂಲಕ ಸರ್ಕಾರಕ್ಕೆ ಕಳುಹಿಸುತ್ತಾ, ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ಕೋರಿರುತ್ತಾರೆ. ಸಕ್ಷಮ ಪ್ರಾಧಿಕಾರವಾದ, ಸರ್ಕಾರವು ಅಪರ ಪೋಲೀಸ್ ಮಹಾ ನಿರ್ದೇಶಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಒದಗಿಸಿರುವ ಈ ಕೆಳಕಂಡ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ.

1) ಪ್ರಕರಣದ ವರ್ತಮಾನ ವರದಿ
2) ಶೋಧನಾ ಪಂಚನಾಮೆ :–
   I. ಆಪಾದಿತ ಸರ್ಕಾರಿ ಅಧಿಕಾರಿಯ ಅಣ್ಣ ಶ್ರೀ ಹನುಮಂತಪ್ಪ ಇವರ ವಾಸದ ಮನೆ ಸಂಖ್ಯೆ 744/ಎ, ವಾರ್ಡ್ ನಂ – 17, ಕಮಲಾಪುರ.
   II. ಆಪಾದಿತ ಸರ್ಕಾರಿ ಅಧಿಕಾರಿಯ ಕಮಲಾಪುರದಲ್ಲಿನ ವಾಸದ ಬಾಡಿಗೆ ಮನೆ.
   III. ಆಪಾದಿತ ಸರ್ಕಾರಿ ಅಧಿಕಾರಿಯ ಕಮಲಾಪುರದ ಜಮೀನಿನಲ್ಲಿರುವ ತೋಟದ ಮನೆ.
   IV. ಆಪಾದಿತ ಸರ್ಕಾರಿ ಅಧಿಕಾರಿಯ ಬೆಂಗಳೂರಿನ ಯಲಹಂಕ ಪುಟ್ಟೇನಹಳ್ಳಿಯ ಪವನೀ ರೆಸಿಡೆನ್ಸಿಯ ಬ್ಲೂಬೆಲ್‌ನಲ್ಲಿನ ಪ್ಲಾಟ್ ಸಂಖ್ಯೆ – 6.
   V. ಆಪಾದಿತ ಸರ್ಕಾರಿ ಅಧಿಕಾರಿ ಇವರು ಕಾರ್ಯ ನಿರ್ವಹಿಸುತ್ತಿರುವ ಜಿಲ್ಲಾ ಅರಣ್ಯ ಸಂಚಾರಿ ದಳದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿಯಲ್ಲಿನ ಅಧಿಕೃತ ಕೋಣೆ.

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ** : ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರಿ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ 07-08-1995

2) ಮುಖ್ಯಮಂತ್ರಿಯವರ ಕಛೇರಿ ಟಿಪ್ಪಣಿ ಪತ್ರ ಸಂ. : ಮುಮಂ/ಆ.ಕಾ/974/2009, ದಿನಾಂಕ 25-03-2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 07-08-1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ತ್ರೈಮಾಸಿಕ ಪರಿಶೀಲಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 68 ಯೋವಿವಿ 2009 (ಭಾ), ಬೆಂಗಳೂರು, ದಿನಾಂಕ: 22-6-2010**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಆರು ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ತಾಲ್ಲೂಕು | ಹೆಸರು | ವರ್ಗ |
|---|---|---|---|
| 1. | ತೀರ್ಥಹಳ್ಳಿ ತಾಲ್ಲೂಕು (ಶಿವಮೊಗ್ಗ ಜಿಲ್ಲೆ) | 1) ಶ್ರೀ ಸಚೀಂದ್ರ ಹೆಗಡೆ ಬಿನ್ ಗುಂಡಪ್ಪ ಹೆಗಡೆ ಮೇಗರವಳ್ಳಿ ಗ್ರಾಮ ಮತ್ತು ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಸಾಮಾನ್ಯ |
| | | 2) ಶ್ರೀ ಮತಿ ಸುಜಾತ ವಿ. ಆಚಾರ್ಯ ಕೋಂ ವಾಸುದೇವ ಅಚಾರ್ಯ, 14ನೇ ಕ್ರಾಸ್, ಸೊಪ್ಪುಗುಡ್ಡೆ, ತೀರ್ಥಹಳ್ಳಿ ತಾಲ್ಲೂಕು. | ಮಹಿಳೆ |
| | | 3) ಶ್ರೀ ಅಬುಬೂಕ್ಕರ್ ಬಿನ್ ಅಹಮದ್ ಬ್ಯಾರಿ ಮೂವಳ್ಳಿ, ಸಿಂದುವಾಡಿ ಅಂಚೆ ತೀರ್ಥಹಳ್ಳಿ ತಾಲ್ಲೂಕು. | ಅ.ಸಂ. |
| | | 4) ಶ್ರೀ ಚಂದಹಳ್ಳಿ ಸೋಮಶೇಖರ್ ಬಿನ್ ಕೊಲ್ಲಪ್ಪಗೌಡ ಚಂದವಳ್ಳಿ, ನೊಣಬೂರು ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಹಿಂ. ಪ. |
| | | 5) ಶ್ರೀ ವೈ. ಪ್ರಸಾದ ಶೆಟ್ಟಿ ಬಿನ್ ರಘುರಾಮ ಶೆಟ್ಟಿ ತಳಲೆ, ಸಿಂಗನಬಿದರೆ ಅಂಚೆ, ತೀರ್ಥಹಳ್ಳಿ ತಾಲ್ಲೂಕು. | ಸಾಮಾನ್ಯ |
| | | 6) ಶ್ರೀ ಹೆಚ್. ಬಿ. ಗೋಪಾಲ್ ಬಿನ್ ಬಚ್ಚಾನಾಯಕ್ ಹೊಸತೋಟ, ದೇವಂಗಿ ಅಂಚೆ, ತೀರ್ಥಹಳ್ಳಿ ತಾಲ್ಲೂಕು | ಎಸ್. ಟಿ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಬಿ. ಚಿಕ್ಕರಾಜು)**

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2

ಪಿ.ಆರ್. 1733 ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ** : ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಚಿಕ್ಕಬಳ್ಳಾಪುರ ಜಿಲ್ಲೆ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರಿ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ 07-08-1995

2) ಮುಖ್ಯಮಂತ್ರಿಯವರ ಕಛೇರಿ ಟಿಪ್ಪಣಿ ಪತ್ರ ಸಂ. : ಮುಮಂ/ಆ.ಕಾ/1176/2010, ದಿನಾಂಕ 27-11-2009

3) ಶ್ರೀ ಕೆ. ಎಸ್. ಈಶ್ವರಪ್ಪ, ರಾಜಾಧ್ಯಕ್ಷರು, ಭಾ.ಜ.ಪ. ಇವರ ಪತ್ರ ಸಂಖ್ಯೆ : ಭಾಜಪ/ರಾಕಾ/ನಾನಿ/158/2010, ದಿನಾಂಕ 06-04-2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 07-08-1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಚಿಕ್ಕಬಳ್ಳಾಪುರ ಜಿಲ್ಲೆಯ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 64 ಯೋವಿವಿ 2009 (ಭಾ), ಬೆಂಗಳೂರು, ದಿನಾಂಕ: 22-6-2010**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಐದು ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆ/ತಾಲ್ಲೂಕು | ಹೆಸರು | ವರ್ಗ |
|---|---|---|---|
| 1. | ಚಿಕ್ಕಬಳ್ಳಾಪುರ ಜಿಲ್ಲೆ | 1) ಶ್ರೀ ರಾಮಕೃಷ್ಣಾ ರೆಡ್ಡಿ ಬಿನ್ ವೆಂಕಟರಮಣರೆಡ್ಡಿ, ನಂಜಯ್ಯಗಾರ್ಲಹಳ್ಳಿ, ನಗರಗೆರೆ ಹೋ, ಗೌರಿಬಿದನೂರು ತಾಲ್ಲೂಕು | ಬಿ.ಸಿ.ಎಂ. |
| | | 2) ಶ್ರೀಮತಿ ಯೋಗೀಶ್ವರಿ ವಿಜಯ್ ವಿ. ಬೀಚಗಾನಹಳ್ಳಿ ಕ್ರಾಸ್, ಗುಡಿಬಂಡೆ ತಾಲ್ಲೂಕು. | ಮಹಿಳೆ |
| | | 3) ಶ್ರೀ ಶ್ರೀನಿವಾಸಪ್ಪ ಬಿನ್ ಚಿಕ್ಕನಾರಾಯಣಪ್ಪ, ಬತ್ತಲಹಳ್ಳಿ, ಎಮರೆಡ್ಡಿಹಳ್ಳಿ ಅಂಚೆ, ಚಿಂತಾಮಣಿ ತಾ॥ | ಎಸ್‌ಸಿ/ಎಸ್‌ಟಿ |
| | | 4) ಶ್ರೀ ಪಿ. ವಿ. ನಾಗರಾಜ್ ಬಿನ್ ಪಿ. ವೀರಪ್ಪ, ಅನೂರು, ತಿಪ್ಪೇನಹಳ್ಳಿ ಅಂಚೆ, ಶಿಡ್ಲಘಟ್ಟ ತಾಲ್ಲೂಕು. | ಸಾಮಾನ್ಯ |
| | | 5) ಶ್ರೀ ಪಿ. ಕೆ. ವೆಂಕಟೇಶ ಪ್ರಸಾದ್ ಬಿನ್ ಶ್ರೀ ಪಿ. ಜಿ. ಕೃಷ್ಣಮೂರ್ತಿ, ಉತ್ತರ ಬಡಾವಣೆ, ಚಿಕ್ಕಬಳ್ಳಾಪುರ ಟೌನ್ | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಬಿ. ಚಿಕ್ಕರಾಜು)**

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2

ಪಿ.ಆರ್. 1734 ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ** : ರಾಷ್ಟ್ರೀಯ ಹೆದ್ದಾರಿ-48ರ ಶಿರಾಡಿಘಾಟ್ ರಸ್ತೆ ಕಾಮಗಾರಿಯು ಕಳಪೆಯಾಗಿ ಅವಧಿಪೂರ್ವದಲ್ಲಿ ಹಾಳಾಗಿರುವ ಬಗ್ಗೆ ಜಂಟಿ ಇಲಾಖಾ ವಿಚಾರಣೆ- ಶ್ರೀ ಆರ್. ಶ್ರೀನಿವಾಸ್, ಮುಖ್ಯ ಇಂಜಿನಿಯರ್‌ರ ವಿರುದದ್ಧ ಅರೋಪ ಕೈಬಿಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರಿ ಆದೇಶ ಸಂಖ್ಯೆ : ಸಂ.ಸಿಆಸುಇ 12 ಇಮುವಿ 2009, ದಿನಾಂಕ 11-09-2009

2) ಸರ್ಕಾರದ ಆದೇಶ ಸಂ. ಲೋಇ 318 ಸೇಇವಿ 2008, ದಿನಾಂಕ 17-4-2010

**ಪ್ರಸ್ತಾವನೆ :**

ಶ್ರೀ ಆರ್. ಶ್ರೀನಿವಾಸ್, ಮುಖ್ಯ ಇಂಜಿನಿಯರ್ ಮತ್ತಿತರ 12 ಅಧಿಕಾರಿಗಳು ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿವಲಯ ಈ ಹುದ್ದೆ ಮತ್ತು ಸದರಿ ಹುದ್ದೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ರಾಷ್ಟ್ರೀಯ ಹೆದ್ದಾರಿ ಸಂ. 48ರ ಕಿ.ಮೀ. 226 ರಿಂದ 264ರ ವರೆಗಿನ (ಶಿರಾಡಿ ಘಾಟ್) ರಸ್ತೆಯ ಕಾಮಗಾರಿಯನ್ನು ಕಳಪೆಯಾಗಿನಿರ್ವಹಿಸಿ ಮತ್ತು ಕಳಪೆ ಡಾಂಬರೀಕರಣ ಮಾಡಿ, ಗುಣ ನಿಯಂತ್ರಣ ಪರೀಕ್ಷೆಗಳಿಗೆ ಅನುಗುಣವಾಗಿ ಸಮರ್ಪಕ ಕಾರ್ಯನಿರ್ವಹಿಸದೇ ಸರ್ಕಾರಕ್ಕೆ ಕೋಟ್ಯಾಂತರ ರೂ.ನಷ್ಟವನ್ನು ಉಂಟು ಮಾಡಿರುವ ದುರ್ನಡತೆಯ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ 11-09-2009ರ ಸರ್ಕಾರದ ಅದೇಶದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಸಾರಿಗೆ ಇಲಾಖೆ ಇವರನ್ನು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಆದೇಶಿಸಲಾಗಿತ್ತು.

ಅದರಂತೆ, ಲೋಕೋಪಯೋಗಿ ಇಲಾಖೆ ಜಾರಿಗೊಳಿಸಿದ ಆರೋಪಣಾ ಪಟ್ಟಿ/ತಿಳುವಳಿಕೆ ಪತ್ರಕ್ಕೆ ಶ್ರೀ ಆರ್. ಶ್ರೀನಿವಾಸ್, ಹಿಂದಿನ ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ, ಬೆಂಗಳೂರು ಇವರು ನೀಡಿರುವ ಉತ್ತರ/ವಿವರಣೆಯನ್ನು ಲೋಕೋಪಯೋಗಿ ಇಲಾಖೆ ಪರಿಗಣಿಸಿ, ಮೇಲೆ (2)ರಲ್ಲಿ ಓದಲಾದ ದಿನಾಂಕ 17-04-2010ರ ಸರ್ಕಾರದ ಆದೇಶದಲ್ಲಿ ಇವರಿಗೆ ಜಾರಿಗೊಳಿಸಿದ್ದ ದೋಷಾರೋಪಣೆಗಳನ್ನು ಕೈಬಿಡಲಾಗಿದೆ ಎಂದು ಆದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಇಮುವಿ, 2009, ಬೆಂಗಳೂರು, ದಿನಾಂಕ: 30-06-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ ಶ್ರೀ ಆರ್. ಶ್ರೀನಿವಾಸ್, ಮುಖ್ಯ ಇಂಜಿನಿಯರ್ ಇವರ ವಿರುದ್ಧ, ಸರ್ಕಾರದ ಆದೇಶ ಸಂ:ಸಿಆಸುಇ 12 ಇಮುವಿ 2009, ದಿನಾಂಕ 11-09-2009 ರಂತೆ ಕೈಗೊಳ್ಳಲು ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ವಾಸುದೇವಮೂರ್ತಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1735 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ಜಲಸಂಪನ್ಮೂಲ ಸಚಿವಾಲಯ**

**ವಿಷಯ** : ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಅಸಂಗಿ ಹತ್ತಿರ ಕಟಗಿನಹಳ್ಳಿ ಗ್ರಾಮದ ಸ.ನಂ. 49, 50 ಗಳಿಗೆ ಏತ ನೀರಾವರಿ ಯೋಜನೆ ಮೂಲಕ ಮಲಪ್ರಭಾ ನದಿಯಿಂದ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ** :
1) ದಿನಾಂಕ 26–04–10ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ : ಮುಇಂ/ಸನೀ/(ಉ) ವಲಯ/ಬಿಜೆಪಿ/ಎಇ–6/2009–10/2681.
2) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 05–06–10ರ ಪತ್ರ ಸಂಖ್ಯೆ : ಮುಸದ/ಆಪ್ತ ಶಾಖೆ/ಟೆಂಡರ್/09–10/1875.

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಅಸಂಗಿ ಹತ್ತಿರ ಕಟಗಿನಹಳ್ಳಿ ಗ್ರಾಮದ ಸ.ನಂ. 49, 50 ಗಳಿಗೆ ಏತ ನೀರಾವರಿ ಯೋಜನೆ ಮೂಲಕ ಮಲಪ್ರಭಾ ನದಿಯಿಂದ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ 13.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನಿರಾವರಿ ವೃತ್ತ, ಬೆಳಗಾಂ ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ 12–03–10 |
| 2 | ವಿಜಯ ಕರ್ನಾಟಕ ದಿನಪತ್ರಿಕೆ | ದಿನಾಂಕ 13–03–10 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಮೂರು ಜನ ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಳನ್ನು ಪಡೆದು ನಿಗದಿತ ದಿನದಂದು ಟೆಂಡರ್‌ನ್ನು ಸಲ್ಲಿಸಿರುತ್ತಾರೆ. ಇವರ ಟೆಂಡರ್‌ಗಳನ್ನು ದಿನಾಂಕ 22–03–10ರಂದು ತೆರೆಯಲಾಗಿದ್ದು, ಈ ಪೈಕಿ ಅರ್ಹರಾದ ಇಬ್ಬರು ಟೆಂಡರುದಾರರ ವಿವರಗಳು ಕೆಳಕಂಡಂತಿವೆ.

ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ ರೂ. 7,56,561/–

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿಗೆ ಪರಿಸ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|
| 1 | ಶ್ರೀ ಎಂ. ಐ. ಮುರಾಳ, 1ನೇ ದರ್ಜೆ ಗುತ್ತಿಗೆದಾರರು | ರೂ. 7,99,492/– | 5.67 ಹೆಚ್ಚು |
| 2 | ಶ್ರೀ ಜಿ. ಟಿ. ಮುಕುಂದ, 1ನೇ ದರ್ಜೆ ಗುತ್ತಿಗೆದಾರರು | ರೂ. 11,68,670/– | 54.47 ಹೆಚ್ಚು |

ಮೇಲ್ಕಂಡ ಗುತ್ತಿಗೆದಾರರ ಪೈಕಿ ಅತ್ಯಂತ ಕನಿಷ್ಠ ದರಗಳನ್ನು ನಮೂದಿಸಿರುವ ಗುತ್ತಿಗೆದಾರರದ ಶ್ರೀ ಎಂ. ಐ. ಮುರಾಳ, ಒಂದನೇ ದರ್ಜೆ ಗುತ್ತಿಗೆದಾರರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೊಲಿಸದಾಗ ಶೇಕಡ 5.67 ರಷ್ಟು ಹೆಚ್ಚಾಗಿದ್ದು, ಈ ಟೆಂಡರನ್ನು ಸಂದಾನದ ಮೂಲಕ ಅನುಮೋದಿಸುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 29–05–2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಗೂ ಮೊದಲು ಗುತ್ತಿಗೆದಾರರು ಪತ್ರ ಮುಖೇನ ಅವರು ನಮೂಧಿಸಿರುವ ದರಗಳಂತೆಯೇ ಟೆಂಡರ್ ಅನುಮೋಧಿಸುವಂತೆ ಕೋರಿದ್ದು ಸಭೆಯಲ್ಲಿ ಅವರ ಪತ್ರವನ್ನು ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 7,56,561/– ಗಳ ಮೇಲೆ ಶೇಕಡ 5.67 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 7,99,492/–ಗಳಿಗೆ ಕಾಮಗಾರಿಯನ್ನು ಶ್ರೀ ಎಂ. ಐ. ಮುರಾಳ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 32 ಏನೀಯೋ 2010, ಬೆಂಗಳೂರು, ದಿನಾಂಕ: 29–06–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲೂಕಿನ ಅಸಂಗಿ ಹತ್ತಿರ ಕಟಗಿನಗಳ್ಳಿ ಗ್ರಾಮದ ಸ.ನಂ. 49, 50ರ ಜಮೀನುಗಳಿಗೆ ಏತ ನೀರಾವರಿ ಯೋಜನೆ ಮೂಲಕ ಮಲಪ್ರಭಾ ನದಿಯಿಂದ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಂತೆ ಟೆಂಡರಿಗಿಡಲಾದ ಮೊತ್ತ ರೂ. 7,56,561/–ಗಳ ಮೇಲೆ ಶೇಕಡ 5.67 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 7,99,492/–ಗಳಿಗೆ (ಏಳು ಲಕ್ಷದ ತೊಂಭತ್ತೊಂಭತ್ತು ಸಾವಿರದ ನಾಲ್ಕು ನೂರ ತೊಂಭತ್ತೆರೆಡು ರೂ.ಗಳು ಮಾತ್ರ) ಶ್ರೀ ಎಂ. ಐ. ಮುರಾಳ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು

2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು

ಈ ದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ರುದ್ರಮೂರ್ತಿ)**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1736

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಮೆ॥ ಕೀರ್ತಿ ಇಂಡಸ್ಟ್ರೀಸ್ (ಲೀ), ಹೈದರಾಬಾದ್‌ರವರು ಯಾದಗೀರ್ ಜಿಲ್ಲೆ, ಯಾದಗೀರ್ ತಾಲ್ಲೂಕು, ಮಸ್ತೂರು ಎಂಬಲ್ಲಿ ಸ್ಥಾಪಿಸಲಿರುವ 25 ಮೆಗಾ ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನಿಡುವ ಬಗ್ಗೆ.

**ಓದಲಾಗಿದೆ** :
1) ರಿಟ್ ಅರ್ಜಿ ಸಂಖ್ಯೆ : 9803/07ರಲ್ಲಿ ಗೌ. ಉಚ್ಚನ್ಯಾಯಾಲಯವು ನೀಡಿದ ಆದೇಶ ದಿನಾಂಕ 02–06–09.
2) ಸರ್ಕಾರದ ಆದೇಶ ಸಂ. ಸಿಐ 60 ಎಸ್‌ಜಿಎಫ್ 06, ದಿನಾಂಕ 20–06–07
3) ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಐ 230 ಎಸ್‌ಜಿಎಫ್ 07, ದಿನಾಂಕ 11–09–07
4) ಸರ್ಕಾರದ ಆದೇಶ ಸಂಖ್ಯೆ : ಸಿಐ 187 ಎಸ್‌ಜಿಎಫ್ 07, ದಿನಾಂಕ 11–09–07
5) ಸರ್ಕಾರದ ಆದೇಶ ಸಂಖ್ಯೆ : ಸಿಐ 66 ಎಸ್‌ಪಿಐ 09, ದಿನಾಂಕ 11–08–09
6) ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ : ಡಿಎಸ್‌ಕೆ/ಡಿಇವಿ/91/2005–06, ದಿನಾಂಕ 18–11–2009.

**ಪ್ರಸ್ತಾವನೆ :**

ಮೇಲೆ ಓದಲಾದ (2)ರಲ್ಲಿರುವ ಸರ್ಕಾರದ ಆದೇಶದಲ್ಲಿ ಮೆ॥ ಕೀರ್ತಿ ಇಂಡಸ್ಟ್ರೀಸ್ (ಲಿ) ಹೈದರಬಾದ್ ರವರಿಗೆ ಗುಲಬರ್ಗಾ ಜಿಲ್ಲೆ, ಯಾದಗೀರ ತಾಲ್ಲೂಕು, ಮಸ್ತೂರು ಎಂಬಲ್ಲಿ 26 ಮೆ॥ ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ತಾತ್ವಿಕ ಅನುಮೋದನೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ (3)ರಲ್ಲಿರುವ ಅಧಿಸೂಚನೆಯಲ್ಲಿ ಮೆ॥ ಕೀರ್ತಿ ಇಂಡಸ್ಟ್ರೀಸ್ (ಲಿ) ರವರಿಗೆ ಕಬ್ಬಿನ ಮೀಸಲು ಕ್ಷೇತ್ರಗಳ ಹಂಚಿಕೆ ಮಾಡಲಾಗಿದೆ. ಗೌ.ಉಚ್ಚನ್ಯಾಯಾಲಯವು ಮೇಲೆ ಓದಲಾದ (1)ರಲ್ಲಿರುವ ರಿಟ್ ಅರ್ಜಿ ಸಂಖ್ಯೆ 9803/07ರಲ್ಲಿ ದಿನಾಂಕ 02–06–09ರಂದು ನೀಡಿದ ತೀರ್ಪಿನಲ್ಲಿ ಮೆ॥ ಕೀರ್ತಿ ಇಂಡಸ್ಟ್ರೀಸ್ (ಲಿ) ರವರಿಗೆ ಗುಲಬರ್ಗಾ ಜಿಲ್ಲೆ ಯಾದಗೀರ್ ತಾಲ್ಲೂಕು, ಮಸ್ತೂರು ಎಂಬಲ್ಲಿ 26 ಮೆ.ವ್ಯಾ. ಸಹ ವಿದ್ಯುತ್ ಘಟಕವನ್ನೊಳಗೊಂಡ 3500 ಟಿ.ಸಿ.ಡಿ. ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ತಾತ್ವಿಕ ಅನುಮೋದನೆ ನೀಡಲಾಗಿದ್ದು ಮೇಲೆ ಓದಲಾದ (2) ರಲ್ಲಿರುವ ಸರ್ಕಾರದ ಆದೇಶವನ್ನು ಡಣಾಚ್ಛು ಮಾಡಿ ಮೆ॥ ಕೀರ್ತಿ ಇಂಡಸ್ಟ್ರೀಸ್ (ಲಿ)ರವರು ದಿನಾಂಕ 27–07–07ರಂದು ಕೇಂದ್ರ ಸರ್ಕಾರದಿಂದ ಪಡೆದಿರುವ ಐ.ಇ.ಎಂ. ಮೇಲೆ ಆದೇಶ ಹೊರಡಿಸಲು ರಾಜ್ಯ ಸರ್ಕಾರ ಮುಕ್ತವಾಗಿದೆ ಎಂದು ತೀರ್ಪು ನೀಡಿದ್ದು, ಈ ಹಿನ್ನೆಲೆಯಲ್ಲಿ ಮೆ॥ ಕೀರ್ತಿ ಇಂಡಸ್ಟ್ರೀಸ್ (ಲಿ)ರವರು ಈ ಹಿಂದೆ ಐ.ಇ.ಎಂ. ಪಡೆದಿದ್ದ ಸ್ಥಳವಾದ ಗುಲಬರ್ಗಾ ಜಿಲ್ಲೆ, ಯಾದಗೀರ್ ತಾಲ್ಲೂಕು, ಮಸ್ತೂರು ಎಂಬಲ್ಲಿ (ಈ ಸ್ಥಳ ಪ್ರಸ್ತುತ ಹೊಸದಾಗಿ ರಚಿತವಾದ ಯಾದಗಿರ್ ಜಿಲ್ಲೆ ಯಾದಗಿರ್ ತಾಲ್ಲೂಕಿನಲ್ಲಿದೆ) ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ದಿನಾಂಕ 27–07–07 ರಂದು ಪಡೆಯಲಾಗಿರುವ ಐ.ಇ.ಎಂ. ಆಧಾರದ ಮೇಲೆ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ತಾತ್ವಿಕ ಅನುಮೋದನೆ ನೀಡುವ ಹಾಗೂ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡುವ ಬಗ್ಗೆ ಆಯುಕ್ತರು ಕಬ್ಬು ಅಭಿವೃದ್ಧಿರವರು ಮೇಲೆ ಓದಲಾದ (5)ರಲ್ಲಿನ ದಿನಾಂಕ 18–11–09ರ ಪತ್ರದಲ್ಲಿ ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (5)ರಲ್ಲಿರುವ ಆದೇಶದಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಮೆ॥ ಕೀರ್ತಿ ಇಂಡಸ್ಟ್ರೀಸ್ (ಲಿ)ರವರು ಸಲಿಸಿದ್ದ 151.00 ಕೋಟಿ ರೂ.ಗಳ ಬಂಡವಾಳ ಹೊಡಿಕೆ ಯೋಜನಾ ಪ್ರಸ್ತಾವನೆಗೆ SHLCCಯು ಅನುಮೋದನೆ ನೀಡಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಮೇಲೆ ಓದಲಾದ (4) ರಲ್ಲಿರುವ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ

**ಸರ್ಕಾರಿ ಆದೇಶ ಸಂಖ್ಯೆ: ಸಿಐ 178 ಎಸ್‌ಜಿಎಫ್ 2009, ಬೆಂಗಳೂರು, ದಿನಾಂಕ: 30–06–2010**

ಮೆ॥ ಕೀರ್ತಿ ಇಂಡಸ್ಟ್ರೀಸ್ (ಲಿ)., ಹೈದರಾಬಾದ್ ರವರು ಯಾದಗೀರ್ ಜಿಲ್ಲೆ, ಯಾದಗೀರ್ ತಾಲ್ಲೂಕು, ಮಸ್ತೂರು ಗ್ರಾಮದಲ್ಲಿ 25 ಮೆಗಾ ವ್ಯಾಟ್ ಸಹ ವಿದ್ಯತ್ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ. ಕಾರ್ಖಾನೆಗೆ ಕಬ್ಬಿನ ಮೀಸಲು ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅಧಿಸೂಚನೆಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಮುಂದುವರೆದು ಸಹವಿದ್ಯುತ್ ಘಟಕ ಸ್ಥಾಪನೆಗೆ ಅನುಮತಿಯನ್ನು ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪಿ. ಆನಂದ್ ಕುಮಾರ್)**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1737

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ** : ಕುಮಾರಿ ಎಸ್. ವೈ. ಸುಜಾತ, ರೇಷ್ಮೆ ಪ್ರದರ್ಶಕರು ಇವರ ಪರಿವೀಕ್ಷಣಾ ಅವಧಿಯನ್ನು ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ** : 1) ಅಧಿಕೃತ ಜ್ಞಾಪನ ಸಂಖ್ಯೆ : ಸಿಬ್ಬಂದಿ (2ಎ)/ಆರ್‌ಇಸಿ/ಪಿಹೆಚ್/100–1/91–92, ದಿನಾಂಕ 11–1–1993.
2) ಅಧಿಕೃತ ಜ್ಞಾಪನ ಸಂಖ್ಯೆ : ಸಿಬ್ಬಂದಿ 1(8)/ಪಪೂಅ/183/99–2000, ದಿನಾಂಕ 5–10–2004.
3) ಅರ್ಜಿ ಸಂಖ್ಯೆ : 3211/2001ರಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯ, ದಿನಾಂಕ 10–11–2008ರ ಆದೇಶ.
4) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ : ಸಿಬ್ಬಂದಿ 1 (8) /ಪಪೂಅ/183/99–2000, ದಿನಾಂಕ 19–2–2010.

**ಪ್ರಸ್ತಾವನೆ :**

ಕುಮಾರಿ ಎಸ್. ವೈ. ಸುಜಾತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಕೃತ ಜ್ಞಾಪನದನ್ವಯ ಅಂಗವಿಕಲ ಬ್ಯಾಕ್‌ಲಾಗ್ ಹುದ್ದೆಯ ವಿಶೇಷ ನೇಮಕಾತಿಯಡಿ ರೇಷ್ಮೆ ಪ್ರದರ್ಶಕರ ಹುದ್ದೆಗೆ ನೇಮಕಗೊಂಡು ದಿನಾಂಕ 20–1–1993 ರಲ್ಲಿ ಕಾರ್ಯವರದಿ ಮಾಡಿಕೊಂಡಿರುತ್ತಾರೆ. ನೌಕರರು ಸದರಿ ಹುದ್ದೆಗೆ ನಿಗಧಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆ ಹೊಂದದ ಪ್ರಯುಕ್ತ ಪರಿವಿಕ್ಷಣಾ ಅವಧಿಯನ್ನು ಘೋಷಿಸಿರುವುದಿಲ್ಲ ಮತ್ತು ಅವರು ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಳ್ಳದ ಕಾರಣ ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 6 ರನ್ವಯ ಕ್ರಮ ಜರುಗಿಸುವ ಕುರಿತು ನೌಕರರಿಗೆ ತಿಳುವಳಿಕೆ ಪತ್ರವನ್ನು ಇಲಾಖೆಯ ಜಾರಿಗೊಳಿಸಿರುತ್ತದೆ. ನೌಕರರು ಈ ಬಗ್ಗೆ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾವೆ ಸಂಖ್ಯೆ : 3211/2001ನ್ನು ದಾಖಲಿಸಿದ್ದು, ತಿಳುವಳಿಕೆ ಪತ್ರವನ್ನು ರದ್ದುಗೊಳಿಸುವಂತೆ ಇಲಾಖಾ ಪರೀಕ್ಷೆ ಪಾಸು ಮಾಡಿಕೊಳ್ಳುವುದರಿಂದ ವಿನಾಯಿತಿ ನೀಡುವಂತೆ ಅಥವಾ ಹೆಚ್ಚಿನ ಕಾಲಾವಕಾಶವನ್ನು ನೀಡುವಂತೆ ಕೋರಿರುತ್ತಾರೆ. ನೌಕರರು 2008ನೇ ಸಾಲಿನ ವರೆಗೂ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವಂತೆ ಇಲಾಖೆಯನ್ನು ಕೋರಿದ್ದು, ಈ ಬಗ್ಗೆ ಇಲಾಖೆಯ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ ಬಗ್ಗೆ ತಿಳಿಸಿ, ಪ್ರಕರಣವು ನ್ಯಾಯಾಲಯದಲ್ಲಿ ಬಾಕಿ ಇದ್ದುದ್ದರಿಂದ ನೌಕರರು ಸೇವೆಯಲ್ಲಿ ಮುಂದುವರೆದಿರುತ್ತಾರೆ. ಈ ಮಧ್ಯೆ ಇಲಾಖೆಯು ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ನೌಕರರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 20–1–1995 ರಿಂದ 19–1–1996 ರವರೆಗೆ ವಿಸ್ತರಿಸಿ ಆದೇಶಿಸಿರುತ್ತದೆ. ಈ ಮಧ್ಯೆ ನೌಕರರು ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಂಡು ನ್ಯಾಯಾಲಯದಲ್ಲಿ ದಾಖಲಿಸಿದ್ದ ಅರ್ಜಿಯನ್ನು ಹಿಂದಕ್ಕೆ ಪಡೆಯಲು ಕೋರಿದ್ದರಿಂದ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಅರ್ಜಿಯನ್ನು ವಜಾಗೊಳಿಸುತ್ತದೆ. ನೌಕರರು ನಿಗದಿ ಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ವಿಳಂಬವಾಗಿ ತೇರ್ಗಡೆಯಾಗಿರುವುದನ್ನು ಹೊರತುಪಡಿಸಿದರೆ ಉಳಿದಂತೆ ತೃಪ್ತಿಕರವಾಗಿ ಕೆಲಸ ನಿರ್ವಹಿಸಿರುವುದಾಗಿಯೂ, ಯಾವುದೇ ಅಸಾಧಾರಣ ರಜೆ/ವೇತನ ರಹಿತ ಪಡೆದಿರುವುದಿಲ್ಲವೆಂದು ಯಾವುದೇ ಶಿಸ್ತು ಪ್ರಕರಣಗಳಿರುವುದಿಲ್ಲವೆಂದೂ ನೌಕರರು ಸೇವೆಯಲ್ಲಿ ಉತ್ತಮವಾಗಿ ಕೆಲಸ ನಿರ್ವಹಿಸಿದ್ದು, ಅಂಗವಿಕಲ ನೌಕರಾಗಿರುವುದರಿಂದ ಮಾನವೀಯತೆ ದೃಷ್ಟಿಯಿಂದ ಪರೀಕ್ಷಣಾ ಅವಧಿಯನ್ನು ದಿನಾಂಕ 20–1–1996 ರಿಂದ 6–1–2008 ರವರೆಗೆ ವಿಸ್ತರಿಸಿ ಆದೇಶದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಆಯುಕ್ತರ ಕೋರಿಕೆಯಿಂದ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ವಿಷಯವನ್ನು ಸರ್ಕಾರವು ಪರಿಶೀಲಿಸಿದ್ದು, ನೌಕರರು ಅಂಗವಿಕಲರಾಗಿರುವುದರಿಂದ ಮತ್ತು ಇವರ ಕಾರ್ಯನಿರ್ವಹಣೆಯು ತೃಪ್ತಿಕರವಾಗಿದ್ದು, ನೌಕರರು ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸುಮಾಡಿಕೊಂಡಿರುವುದರಿಂದ ಅವರ ಪರಿವೀಕ್ಷಣಾ ಅವಧಿಯನ್ನು ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಅವರು ಪಾಸು ಮಾಡಿದ ದಿನಾಂಕದವರೆಗೆ ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 31 ರೇಇವಿ 2010, ಬೆಂಗಳೂರು, ದಿನಾಂಕ: 30–06–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕುಮಾರಿ ಎಸ್. ವೈ. ಸುಜಾತ, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಹಾರನಹಳ್ಳಿ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(1)(೧) ರನ್ವಯ ದಿನಾಂಕ 20–1–1996 ರಿಂದ 6–11–2008 ರವರೆಗೆ ವಿಸ್ತರಿಸಿದೆ.

ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಅದನ್ನು ಘೋಷಿಸಿದ ನಂತರ ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವೇತನ ಬಾಕಿಯನ್ನು ನೀಡುವಂತಿಲ್ಲ. ಈ ವಿಷಯದಲ್ಲಿ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 10ರಂತೆ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಭಾರತಿ ಆರ್. ನಾಯಕ್)**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1738

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ** : ಕನ್ನಡ ತಂತ್ರಾಂಶ ಅಭಿವೃದ್ಧಿಗೆ ತಜ್ಞರ ಸಮಿತಿ ರಚಿಸಿದ್ದು ಅದಕ್ಕೆ ನೀಡಲಾಗುವ ಅನುದಾನವನ್ನು ರೂ. 1.00 ಕೋಟಿಯಿಂದ ರೂ.2.00 ಕೋಟಿಗಳಿಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ** : ದಿನಾಂಕ: 15.06.2010ರಂದು ನಡೆದ ಸಚಿವ ಸಂಪುಟ ಸಭೆಯ ನಿರ್ಣಯ ಸಂಖ್ಯೆ ಸಿ 267/2010.

**ಪ್ರಸ್ತಾವನೆ:**

ಕನ್ನಡ ಸರ್ವಾಂಗೀಣ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ರೂ.25.00 ಕೋಟಿಗಳ ವಿಶೇಷ ಅನುದಾನ ನೀಡಲಿದೆ ಎಂದು ಮಾನ್ಯ ಮುಖ್ಯಮಂತ್ರಿಯವರು ದಿನಾಂಕ:01.11.2008ರಂದು ನಡೆದ ಕನ್ನಡ ರಾಜ್ಯೋತ್ಸವ ದಿನದಂದು ಪ್ರಕಟಿಸಿರುತ್ತಾರೆ ಈ ಹಿನ್ನೆಲೆಯಲ್ಲಿ ರೂ. 25.00 ಕೋಟಿಗಳ ವೆಚ್ಚದಲ್ಲಿ ಈ ಕೆಳಕಂಡ ಹೊಸ ಯೋಜನೆಗಳನ್ನು ಕೈಗೊಳ್ಳಲು ಉದ್ದೇಶಿಸಿ ಸಚಿವ ಸಂಪುಟದ ಅನುಮೋದನೆಯನ್ನು ಕೋರಲಾಗಿತ್ತು:–

1. ಕನ್ನಡ ತಂತ್ರಾಂಶ ಅಭಿವೃದ್ಧಿಗೆ ತಜ್ಞರ ಸಮಿತಿ ರಚಿಸಿದ್ದು ಅದಕ್ಕೆ ನೀಡಲಾಗುವ ಅನುದಾನವನ್ನು ರೂ.1.00 ಕೋಟಿಯಿಂದ 2.00 ಕೋಟಿಗಳಿಗೆ ಹೆಚ್ಚಿಸಿ ಅನುದಾನ ಬಿಡುಗಡೆ ಮಾಡುವುದು.
2. ಕನ್ನಡ ಮಾಧ್ಯಮದಲ್ಲಿ ಐ.ಎ.ಎಸ್. ಐ.ಪಿ.ಎಸ್. ಹಾಗೂ ಭಾರತೀಯ ವಿದೇಶಿ ಸೇವೆಗಳ ಹುದ್ದೆಗಳಿಗೆ ಕನ್ನಡದಲ್ಲಿ ಆಯ್ಕೆ ಪರೀಕ್ಷೆ ಬರೆದು ಉತ್ತೀರ್ಣರಾಗಿ ಆಯ್ಕೆಯಾಗುವ ಅಭ್ಯರ್ಥಿಗಳಿಗೆ ರೂ. 1.00 ಲಕ್ಷ ಹಾಗೂ ಇತರೆ ಕೇಂದ್ರಾಡಳಿತ ಸೇವೆಗಳಿಗೆ ಕನ್ನಡದಲ್ಲಿ ಆಯ್ಕೆ ಪರೀಕ್ಷೆ ಬರೆದು ಉತ್ತೀರ್ಣರಾಗುವ ಅಭ್ಯರ್ಥಿಗಳಿಗೆ ರೂ.50,000/– ಬಹುಮಾನ ನೀಡುವುದಕ್ಕಾಗಿ ರೂ. 1.00 ಕೋಟಿ ಅನುದಾನವನ್ನು ಬಿಡುಗಡೆ ಮಾಡುವುದು.
3. ಕರ್ನಾಟಕ ರಾಜ್ಯದಲ್ಲಿರುವ ಎಲ್ಲಾ 11 ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಆಯಾ ವಿಶ್ವವಿದ್ಯಾನಿಲಯಗಳಿಂದ ಪಡೆದ ಕ್ರಿಯಾ ಯೋಜನೆಗಳ ಪ್ರಕಾರ ಶಿಕ್ಷಣ ಇಲಾಖೆಯ ಮೂಲಕ ಕ್ರಮ ಜರುಗಿಸಲು ತಲಾ ಒಂದು ವಿಶ್ವವಿದ್ಯಾನಿಲಯಕ್ಕೆ ರೂ. 2.00 ಕೋಟಿಯಂತೆ ಒಟ್ಟು ರೂ. 22.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡುವುದು.

ಮೇಲೆ ಓದಲಾದ ದಿನಾಂಕ: 15.06.2010ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಮೇಲ್ಕಾಣಿಸಿದ 3 ಹೊಸ ಯೋಜನೆಗಳನ್ನು ಕೈಗೊಳ್ಳಲು ಸಚಿವ ಸಂಪುಟವು ಅನುಮೋದನೆ ನೀಡಿರುತ್ತದೆ.

ಕನ್ನಡ ತಂತ್ರಾಂಶ ಅಭಿವೃದ್ಧಿಗೆ ತಜ್ಞರ ಸಮಿತಿ ರಚಿಸಿದ್ದು ಅದಕ್ಕೆ ನೀಡಲಾಗುವ ಅನುದಾನವನ್ನು ರೂ.1.00 ಕೋಟಿಯಿಂದ ರೂ. 2.00 ಕೋಟಿಗಳಿಗೆ ಹೆಚ್ಚಿಸಲು ಸರ್ಕಾರವು ನಿರ್ಧರಿಸಿರುತ್ತದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 131(1) ಕಸನಿ 2008, ಬೆಂಗಳೂರು, ದಿನಾಂಕ: 01.07.2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕನ್ನಡ ತಂತ್ರಾಂಶ ಅಭಿವೃದ್ಧಿಗೆ ತಜ್ಞರ ಸಮಿತಿ ರಚಿಸಿದ್ದು ಅದಕ್ಕೆ ನೀಡಲಾಗುವ ಅನುದಾನವನ್ನು ರೂ.1.00 ಕೋಟಿಯಿಂದ ರೂ.2.00 ಕೋಟಿಗಳಿಗೆ ಹೆಚ್ಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ.ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ

ಮತ್ತು ಪ್ರವಾಸೋದ್ಯಮ ಇಲಾಖೆ. (ಆಡಳಿತ ಕನ್ನಡ)

PR. No 1752

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ** : ಕನ್ನಡ ಮಾಧ್ಯಮದಲ್ಲಿ ಐ.ಎ.ಎಸ್. ಐ.ಪಿ.ಎಸ್. ಹಾಗೂ ಭಾರತೀಯ ವಿದೇಶಿ ಸೇವೆಗಳ ಹುದ್ದೆಗಳಿಗೆ ಕನ್ನಡದಲ್ಲಿ ಆಯ್ಕೆ ಪರೀಕ್ಷೆ ಬರೆದು ಉತ್ತೀರ್ಣರಾಗಿ ಆಯ್ಕೆಯಾಗುವ ಅಭ್ಯರ್ಥಿಗಳಿಗೆ ರೂ. 1.00 ಲಕ್ಷ ಹಾಗೂ ಇತರೆ ಕೇಂದ್ರಾಡಳಿತ ಸೇವೆಗಳಿಗೆ ಕನ್ನಡದಲ್ಲಿ ಆಯ್ಕೆ ಪರೀಕ್ಷೆ ಬರೆದು ಉತ್ತೀರ್ಣರಾಗುವ ಅಭ್ಯರ್ಥಿಗಳಿಗೆ ರೂ. 50,000/– ಗಳ ಪ್ರೋತ್ಸಾಹ ಧನ ನೀಡುವುದಕ್ಕಾಗಿ ರೂ. 1.00 ಕೋಟಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : ದಿನಾಂಕ: 15.06.2010ರಂದು ನಡೆದ ಸಚಿವ ಸಂಪುಟ ಸಭೆಯ ನಿರ್ಣಯ ಸಂಖ್ಯೆ ಸಿ 267/2010.

**ಪ್ರಸ್ತಾವನೆ:**

ಕನ್ನಡ ಸರ್ವಾಂಗೀಣ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ರೂ. 25.00 ಕೋಟಿಗಳ ವಿಶೇಷ ಅನುದಾನ ನೀಡಲಿದೆ ಎಂದು ಮಾನ್ಯ ಮುಖ್ಯಮಂತ್ರಿಯವರು ದಿನಾಂಕ: 01.11.2008ರಂದು ನಡೆದ ಕನ್ನಡ ರಾಜ್ಯೋತ್ಸವ ದಿನದಂದು ಪ್ರಕಟಿಸಿರುತ್ತಾರೆ ಈ ಹಿನ್ನಲೆಯಲ್ಲಿ ರೂ. 25.00 ಕೋಟಿಗಳ ವೆಚ್ಚದಲ್ಲಿ ಈ ಕೆಳಕಂಡ ಹೊಸ ಯೋಜನೆಗಳನ್ನು ಕೈಗೊಳ್ಳಲು ಉದ್ದೇಶಿಸಿ ಸಚಿವ ಸಂಪುಟದ ಅನುಮೋದನೆಯನ್ನು ಕೋರಲಾಗಿತ್ತು :–

1. ಕನ್ನಡ ತಂತ್ರಾಂಶ ಅಭಿವೃದ್ಧಿಗೆ ತಜ್ಞರ ಸಮಿತಿ ರಚಿಸಿದ್ದು ಅದಕ್ಕೆ ನೀಡಲಾಗುವ ಅನುದಾನವನ್ನು ರೂ.1.00 ಕೋಟಿಯಿಂದ ರೂ.2.00 ಕೋಟಿಗಳಿಗೆ ಹೆಚ್ಚಿಸಿ ಅನುದಾನ ಬಿಡುಗಡೆ ಮಾಡುವುದು.
2. ಕನ್ನಡ ಮಾಧ್ಯಮದಲ್ಲಿ ಐ.ಎ.ಎಸ್. ಐ.ಪಿ.ಎಸ್, ಹಾಗೂ ಭಾರತೀಯ ವಿದೇಶಿ ಸೇವೆಗಳ ಹುದ್ದೆಗಳಿಗೆ ಕನ್ನಡದಲ್ಲಿ ಆಯ್ಕೆ ಪರೀಕ್ಷೆ ಬರದು ಉತ್ತೀರ್ಣರಾಗಿ ಆಯ್ಕೆಯಾಗುವ ಅಭ್ಯರ್ಥಿಗಳಿಗೆ ರೂ. 1.00 ಲಕ್ಷ ಹಾಗೂ ಇತರೆ ಕೇಂದ್ರಾಡಳಿತ ಸೇವೆಗಳಿಗೆ ಕನ್ನಡದಲ್ಲಿ ಆಯ್ಕೆ ಪರೀಕ್ಷೆ ಬರೆದು ಉತ್ತೀರ್ಣರಾಗುವ ಅಭ್ಯರ್ಥಿಗಳಿಗೆ ರೂ. 50,000/– ಬಹುಮಾನ ನೀಡುವುದಕ್ಕಾಗಿ ರೂ. 1.00 ಕೋಟಿ ಅನುದಾನವನ್ನು ಬಿಡುಗಡೆ ಮಾಡುವುದು.
3. ಕರ್ನಾಟಕ ರಾಜ್ಯದಲ್ಲಿರುವ ಎಲ್ಲಾ 11 ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಆಯಾ ವಿಶ್ವವಿದ್ಯಾನಿಲಯಗಳಿಂದ ಪಡೆದ ಕ್ರಿಯಾ ಯೋಜನೆಗಳ ಪ್ರಕಾರ ಶಿಕ್ಷಣ ಇಲಾಖೆಯ ಮೂಲಕ ಕ್ರಮ ಜರುಗಿಸಲು ತಲಾ ಒಂದು ವಿಶ್ವವಿದ್ಯಾನಿಲಯಕ್ಕೆ ರೂ. 2.00 ಕೋಟಿಯಂತೆ ಒಟ್ಟು ರೂ.22.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡುವುದು.

ಮೇಲೆ ಓದಲಾದ ದಿನಾಂಕ:15.062010ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಮೇಲ್ಕಾಣಿಸಿದ 3 ಹೊಸ ಯೋಜನೆಗಳನ್ನು ಕೈಗೊಳ್ಳಲು ಸಚಿವ ಸಂಪುಟವು ಅನುಮೋದನೆ ನೀಡಿರುತ್ತದೆ.

ಕನ್ನಡ ಮಾಧ್ಯಮದಲ್ಲಿ ಐ.ಎ.ಎಸ್, ಐ.ಪಿ.ಎಸ್,ಹಾಗೂ ಭಾರತೀಯ ವಿದೇಶಿ ಸೇವೆಗಳ ಹುದ್ದೆಗಳಿಗೆ ಕನ್ನಡದಲ್ಲಿ ಆಯ್ಕೆ ಪರೀಕ್ಷೆ ಬರೆದು ಉತ್ತೀರ್ಣರಾಗಿ ಆಯ್ಕೆಯಗುವ ಅಭ್ಯರ್ಥಿಗಳಿಗೆ ರೂ.1.00 ಲಕ್ಷ ಹಾಗೂ ಇತರೆ ಕೇಂದ್ರಾಡಳಿತ ಸೇವೆಗಳಿಗೆ ಕನ್ನಡದಲ್ಲಿ ಆಯ್ಕೆ ಪರೀಕ್ಷೆ ಬರೆದು ಉತ್ತೀರ್ಣರಾಗುವ ಅಭ್ಯರ್ಥಿಗಳಿಗೆ ರೂ. 50,000/–ಗಳ ಪ್ರೋತ್ಸಾಹ ಧನ ನೀಡಲು ಸರ್ಕಾರವು ನಿರ್ಧರಿಸಿರುತ್ತದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 131(2) ಕಸನಿ 2008, ಬೆಂಗಳೂರು, ದಿನಾಂಕ: 1–07–2010.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ಐ.ಎ.ಎಸ್. ಐ.ಪಿ.ಎಸ್, ಹಾಗೂ ಭಾರತೀಯ ವಿದೇಶಿ ಸೇವೆಗಳ ಹುದ್ದೆಗಳಿಗೆ ಕನ್ನಡದಲ್ಲಿ ಆಯ್ಕೆ ಪರೀಕ್ಷೆ ಬರೆದು ಉತ್ತೀರ್ಣರಾಗಿ ಆಯ್ಕೆಯಾಗುವ ಅಭ್ಯರ್ಥಿಗಳಿಗೆ ರೂ.1.00 ಲಕ್ಷ ಹಾಗೂ ಇತರೆ ಕೇಂದ್ರಾಡಳಿತ ಸೇವೆಗಳಿಗೆ ಕನ್ನಡದಲ್ಲಿ ಆಯ್ಕೆ ಪರೀಕ್ಷೆ ಬರೆದು ಉತ್ತೀರ್ಣರಾಗಿ ಆಯ್ಕೆಯಾಗುವ ಅಭ್ಯರ್ಥಿಗಳಿಗೆ ರೂ.50,000/– ಪ್ರೋತ್ಸಾಹ ಧನ ನೀಡಲು ಆದೇಶಿಸಿದೆ. ರೂ 1.00 ಕೋಟಿ ಅನುದಾನವನ್ನು ಇದಕ್ಕೆ 2010–11ನೇ ಸಾಲಿನಲ್ಲಿ ಖರ್ಚು ಭರಿಸಲು ಬಿಡುಗಡೆ ಮಾಡಿ ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಂ.ಕೆ.ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ. (ಆಡಳಿತ ಕನ್ನಡ)

PR. No 1753

**ಒಳಾಡಳಿತ ಸಚಿವಾಲಯ**

**ವಿಷಯ** : ಶ್ರೀ ಸುಭಾಷ್ ವಿಶ್ರಾಮ ನಾಯ್ಕ, ಮಾಜಿ ಪಿ.ಸಿ. ಅಂಕೋಲಾ ಪೊಲೀಸ್ ಠಾಣೆ, ಕಾರವಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ** :

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಉತ್ತರ ಕನ್ನಡ, ಕಾರವಾರ, ಇವರ ಆದೇಶ ಸಂಖ್ಯೆ: ಸಿಬ್ಬಂದಿ 2/ಇವಿ/9/07–08, ಅ.ಪು: 583/08 ದಿ: 10–12–2008
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ ಮಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ2/ಮೇಲ್ಮನವಿ/09 /2009 ದಿನಾಂಕ: 01–07–2009
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 21–8–09
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2) 39/2009–10 ದಿನಾಂಕ:30–12–2009
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 12 ಸಿಎನ್‌ಎಸ್ 10 ದಿನಾಂಕ: 05–5–10 ಮತ್ತು 21–6–2010

**ಪ್ರಸ್ತಾವನೆ:**

ಶ್ರೀ ಸುಭಾಷ್ ವಿಶ್ರಾಮ ನಾಯ್ಕ, ಇವರು ಅಂಕೋಲಾ ಪೋಲೀಸ್ ಠಾಣೆಯಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದುರ್ನಡತೆ, ಕರ್ತವ್ಯಲೋಪ ಹಾಗೂ ಶಿಸ್ತು ಉಲ್ಲಂಘನೆಯ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

1) ನಿಮಗೆ ಜಿಲ್ಲಾ ಪೊಲೀಸ್ ಕಛೇರಿಯ ಆದೇಶ ಸಂಖ್ಯೆ:ಸಿಬ್ಬಂದಿ–1/28/2006–07, ದಿನಾಂಕ:31–05–2006 ರಂತೆ ಅಂಕೋಲಾ ಠಾಣೆಯಿಂದ ಸಿದ್ದಾಪುರ ಪೊಲೀಸ್ ಠಾಣೆಗೆ ವರ್ಗಾವಣೆ ಮಾಡಿದ್ದು ನಿಮ್ಮನ್ನು ಅಂಕೋಲಾ ಪೊಲೀಸ್ ಠಾಣೆಯಿಂದ ದಿನಾಂಕ: 01–06–2006 ರಂದು ಬಿಡುಗಡೆಗೊಳಿಸಿದರೂ ಸಹ ನೀವು ಸಿದ್ದಾಪುರ ಪೊಲೀಸ್ ಠಾಣೆಗೆ ಹೋಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಮೇಲಾಧಿಕಾರಿಯವರು ನೀಡಿದ ಸ್ಪಷ್ಟ ಆದೇಶವನ್ನು ಪರಿಪಾಲಿಸದೆ ಕರ್ತವ್ಯಲೋಪ ಎಸಗಿರುತ್ತೀರಿ.

2) ನೀವು ದಿನಾಂಕ:06–06–06ರಂದು ಅಂಕೋಲಾ ಪೊಲೀಸ್ ಠಾಣಾ ವ್ಯಾಪ್ತಿಯ ಕಾಕರಮಠದಲ್ಲಿ ವಾಸವಾಗಿರುವ ಶ್ರೀಮತಿ ರೇಣುಕಾ ಇವಳ ಪರಿಚಯದ ಮೇರೆಗೆ ಸದರಿ ದಿನ ಸುಮಾರು 08–00 ಗಂಟೆಯ ಸಮಯಕ್ಕೆ ಸದರಿಯವಳ ಪತಿ ಮನೆಯಲ್ಲಿ ಇಲ್ಲದ ಸಮಯ ನೋಡಿ ಪೊಲೀಸ್ ಸಮವಸ್ತ್ರ ಧರಿಸಿ ಸದರಿಯವಳೊಂದಿಗೆ ಮಾತನಾಡುತ್ತಾ ಅವಳೊಂದಿಗೆ ಲೈಂಗಿಕ ಸಂಪರ್ಕ ಹೊಂದುವ ಉದ್ದೇಶದಿಂದ ನಿಮ್ಮ ಮೊಬೈಲ್ ನಂಬರನ್ನು ಸದರಿಯವಳಿಗೆ ನೀಡಿ ನಾಳೆ 10–00 ಗಂಟೆಗೆ ಕಾರವಾರಕ್ಕೆ ಬಂದು ತನ್ನನ್ನು ಫೋನ ಮೂಲಕ ಸಂಪರ್ಕಿಸುವಂತೆಯೂ ಹಾಗೂ ತಾನು ಬಂದು ಕರೆದುಕೊಂಡು ಹೋಗುವುದಾಗಿ ಹೇಳಿ ಅವಳ ಮಾನಕ್ಕೆ ಕುಂದು ತರುವಂತೆ ವರ್ತಿಸಿರುವಿರಿ.

3) ನೀವು ದಿನಾಂಕ: 06–06–06 ರಂದು ಶ್ರೀಮತಿ ರೇಣುಕಾ ಕೋಂ ಸಿದ್ದರಾಮ ವಾಸ್ಟರ ಇವಳ ಜೊತೆ ಅನುಚಿತವಾಗಿ ವರ್ತಿಸಿದ್ದಲ್ಲದೇ ಈ ವಿಷಯವನ್ನು ಬಹಿರಂಗ ಪಡಿಸದಂತೆ ಎಚ್ಚರಿಕೆ ನೀಡಿ ಕಾನೂನಿನ ಪರಿಜ್ಞಾನ ಹೊಂದಿದ ಪೊಲೀಸ್ ಸಿಬ್ಬಂದಿಯಾದಾಗ್ಯೂ ಕೂಡ ಸಾರ್ವಜನಿಕರನ್ನು ರಕ್ಷಿಸುವ ಜವಾಬ್ದಾರಿಯಿಂದ ವಿಮುಖರಾಗಿ ಕರ್ತವ್ಯದ ಮೇಲೆ ಇಲ್ಲದಿದ್ದರೂ ಸಹ ಪೊಲೀಸ್ ಸಮವಸ್ತ್ರ ಧರಿಸಿ, ಸಮವಸ್ತ್ರದ ದುರುಪಯೋಗ ಮಾಡಿ ಶಿಸ್ತಿನ ಇಲಾಖೆಗೆ ಕಳಂಕ ತರುವಂತೆ ವರ್ತಿಸಿ ಶಿಸ್ತಿನ ಸಿಪಾಯಿಯಾಗಿ, ಶಿಸ್ತು ಉಲ್ಲಂಘಿಸಿ ದುರ್ನಡತೆ ಪ್ರದರ್ಶಿಸಿರುವಿರಿ”

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೋಲೀಸ್ ಅಧೀಕ್ಷಕರು, ಕಾರವಾರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:10–12–2008ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ದಿನಾಂಕ: 08–06–06 ರಿಂದ 16–09–06ರ ವರಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 01-07-2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರು ಸರ್ಕಾರದಲ್ಲಿ ಸಲ್ಲಿಸಿದ ಸೇವಾವಧಿಯನ್ನು ಗಣನೆಗೆ ತೆಗೆದುಕೊಂಡು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ ಓದಲಾದ (5) ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 159 ಪೊಸಿಅ 2009, ಬೆಂಗಳೂರು, ದಿನಾಂಕ: 03-07-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸುಭಾಷ್ ವಿಶ್ರಾಮ ನಾಯ್ಕ, ಮಾಜಿ ಪಿ.ಸಿ. ಅಂಕೋಲಾ ಪೊಲೀಸ್ ಠಾಣೆ, ಕಾರವಾರ, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ: 10-12-2008 ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಾಡಿಸಿ **"ಕಡ್ಡಾಯ ನಿವೃತ್ತಿಗೊಳಿಸಿ"** ಆದೇಶಿಸಿದೆ. ದಿನಾಂಕ: 08-06-06ರಿಂದ 16-09-06ರ ವರೆಗಿನ ಅಮಾನತ್ತಿನ ಅವಧಿಯನ್ನು ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. No 1754

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ** : ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕು ಅಂಗಾರಗಟ್ಟಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ** : ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 09/02/10ರ ಪತ್ರ ಸಂಖ್ಯೆ: ಮುಇಂ.ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2009-10/888.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನೀಯರ್‌ರವರ ಪತ್ರದಲ್ಲಿ ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕು ಅಂಗಾರಗಟ್ಟಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಾಸಣಗಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 06/06/1996
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 20/07/1998

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ರಾಣೆಬೆನ್ನೂರಿನ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 729 ಎಲ್‌ಸಿಬಿ2009, ದಿನಾಂಕ 27/02/09 ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ.

| ಕ್ರ. ಸಂ | ಎಲ್‌ಎಸಿ ಪ್ರಕರಣ ಸಂ. | ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 2/01 | 156/5ಪಿ | 4-30 | 1607426 |
| 2 | 3/01 | 163/ಪಿ,163/4, 163/6,163/9 | 1-14, 1-36, 0-12,0—14 | 1305660 |
| 3 | 4/01 | 156/5 | 1-10 | 423061 |
| 4 | 5/01 | 156/5ಪಿ | 2-00 | 676894 |
| 5 | 6/01 | 156/1 | 1-37 | 651512 |
| | ಒಟ್ಟು | | | 4664553 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 42 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 02ನೇ ಜುಲೈ 2010**

ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕು ಅಂಗಾರಗಟ್ಟಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಾಸಣಗಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.46,64,553–00ಗಳನ್ನು (ನಲವತ್ತಾರು ಲಕ್ಷದ ಅರವತ್ತ್ನಾಲ್ಕು ಸಾವಿರದ ಐನೂರ ಐವತ್ತ್ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11 ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್ ಡಿ 1 ಟಿಎಫ್‌ಪಿ2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಎಸ್. ಉದಯಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)
ಜಲ ಸಂಪನ್ಮೂಲ ಇಲಾಖೆ.(ಸಣ್ಣ ನೀರಾವರಿ)

PR. No 1755

**ENERGY SECRETARIAT**

**Sub :** Revision of application fee, processing fee, transfer and time extention fees for NCE power projects-reg.

**READ :**
1. Government Order No: EN 392 NCE 2008 dated: 26.6.2009.
2. Government Order No: EN 392 NCE 2008 dated: 13.10.2009.
3. Corrigendum No: EN 71 EMC-2/2010 dated: 26.05.2010.

**PREAMBLE:**

**1.** In the Government Order read at (1) above, the fees for the NCE power projects has been revised and as fixed detailed below:-

| Sl. No. | Source | Aplication Fee Rs per MW | Transfer fee Rs Per MW | DPR Processing Fee Rs. Per MW |
|---|---|---|---|---|
| 1 | Wind | 10000 | 1% of the Project Cost | 500000 |
| 2 | Small Hydro | 10000 | 1% of the Project Cost | 500000 |
| 3 | Biomass | 10000 | 1% of the Project Cost | 500000 |
| 4 | Cogeneration | 10000 | 1% of the Project Cost | 500000 |
| 5 | Solar | 10000 | 0.1% of the Project Cost | 500000 |
| 6 | Pico Hydro | 1000 | -- | -- |
| 7 | Waste to Energy (MSW) | 10000 | -- | 100000 |
| 8 | Hybrid Systems | 1000 | -- | -- |
| **FEES are non refundable** | | | | |

| Sources | Time Extension fee in Rs per MW |
|---|---|
| All NCE Sources | e) Rs. 100000/MW for one year extension<br>f) Rs. 200000/MW for two year extension<br>g) Rs. 300000/MW for three year extension<br>h) Rs. 500000/MW for four year extension<br>After fourth year if project is not completed and commissioned, the Government has discretion to forfeit the project. |
| Fee is non refundable | |

**2. Security Deposit :-**

The developer/power producer who has been allotted a renewable energy project shall deposit a refundable amount of Rs.5 lakhs per MW as security deposit with Government towards completion of the project in the prescribed time period, at the time of execution of the agreement with the Government.

3. The Security deposit shall stand forfeited to Government in the event of failure of the power producer to adhere to the time scheduled to commission the project as per allotment agreement.

4. **INCENTIVE AND AWARD SCHEME :-**

If the developer completes and commissions the project successfully during the original agreement period, the developers will be awarded with a certificate of appreciation and a cash prize of one lakh per MW.

2. In the Government Order read at (2) above, partial modification has been made to the Government Order No: EN 392 NCE 2008 dated: 26.6.2009, for the revision of fees for the NCE power projects as detailed below:-

In Rs.Lakhs.

| Sl. No. | Source | APPLICATION FEE (PER MW) | PROCESSING FEE (PER MW) | TRANSFER FEE (PER MW) | TIME EXTENSION FEE (PER MW) | SECURITY DEPOSIT (PER MW) |
|---|---|---|---|---|---|---|
| 1 | Wind | 0.1 | 2.0 | 1.5 | 1st Year-1.0<br>2nd Year-2.0<br>3rd Year-3.0<br>4th Year-5.0<br>Government will Issue Cancellation Order after 4th Year) | 1.0 (by way of Bank Guarantee) after all the approval / Clearance are obtained. If the projects are completed with in the stipulated time the security deposit will berefunded, otherwise it will be forfeited to Government. |
| 2 | Small Hydro | 0.1 | 2.0 | 1.5 | 1st Year-1.0<br>2nd Year-2.0<br>3rd Year-3.0<br>4th Year-5.0<br>(Government will Issue Cancellation Order after 4th Year) | 1.0 (by way of Bank Guarantee) after all the approval/ Clearances are obtained. If the projects are completed within the stipulated time the security deposit will be refunded, Otherwise it will be forfeited to Government. |
| 3 | Biomass | 0.1 | 1.0 | 0.1 | 1st Year -1.0<br>2nd Year-2.0<br>3rd Year-3.0<br>4th Year-5.0<br>(Government will issue cancellation Order after 4th Year) | 1.0 by way of Bank Guaratee) after all the approval / clearances are obtained. If the projects are completed with in the stipulated time the security deposit will be refunded. Otherwise it will be forfeited to Government |

| | | | | | | |
|---|---|---|---|---|---|---|
| 4 | Cogeneration | 0.1 | 2.0 | 1.5 | 1st Year-1.0<br>2nd Year-2.0<br>3rd Year-3.0<br>4th Year-5.0<br>(Government will issue cancellation Order after 4thyear) | 1.0 (by way of Bank Guarantee) after all the approval / clearances are obtained. if the projects are completed within the stipulated time the security deposit will be refunded, otherwise it will be forfeited to Government. |
| 5 | Solar | 0.1 | 1.0 | 0.5 | 1st Year-1.0<br>2nd Year-2.0<br>3rd Year-3.0<br>4th Year-5.0<br>(Government will issue cancellation Order after 4th year) | 1.0 (by way of Bank Guarantee) after all the approval/ clearances are obtained . if the projects are completed within the stipulated time the security deposit will be refunded, otherwise it will be forfeited to Government. |
| 6 | Pico Hydro | 0.01 | Nill | Nill | Nill | Nill |
| 7 | Waste to Energy | 0.1 | 0.25 | 0.25 | 1st Year-1.0<br>2nd Year-2.0<br>3rd Year-3.0<br>4th Year-5.0<br>(Government will issue cancellation Order after 4th year) | 1.0 (by way of Bank Guarantee) after all the approval/ clearances are obtained. if the projects are completed within the stipulated time the security deposit will be refunded, otherwise it will be forfeited to Government. |
| 8 | Hybrid Systems | 0.01 | Nill | Nill | Nill | Nill |
| 9 | Change of name of the company not involving the change in the company Identification No. issued by the Registrar of Companies. | 0.1 | -- | -- | -- | -- |
| 10 | Change of name of the company involving the change in the company Identification No. issued by the Registrar of Companies. | -- | --- | The transfer fee as applicable in respect of RenewableE nergy Projects | --- | --- |
| 11 | The Company seeking amalgamation /splitting up of the companies with no change in CIN issued by the ROC. | 0.1 | -- | -- | --- | --- |
| 12 | The Company seeking amalgamation /splitting up of the companies with change in CIN issued by the ROC. | --- | --- | The transfer fee as applicable in respect of RenewableE nergy Projects | --- | --- |

| | | | | | | |
|---|---|---|---|---|---|---|
| 13 | The Company seeking any fecilitation letter to the Financiers. | 0.1/ Projects | --- | --- | --- | --- |
| 14 | The Change of Proprietaryship or partnership to company with CIN issued by ROC | 0.1/MW | --- | --- | --- | --- |
| Except the security deposit, the other fees are non-refundable | | | | | | |

3) In the Corrigendum read at (3) above, in the Order portion of the Government Order No: EN 392 NCE 2008 dated: 13.10.2009 the Sl.No. 4 is revised as below :-

**Rs. In lakhs**

| Sl. No | Source | **APPLICATION FEE(PER MW)** | **PROCESSING FEE(PER MW)** | **TRANSFER FEE (PER MW)** | **TIME EXTENTION FEEE (PER MW)** | **SECURITY DEPOSIT(PER MW)** |
|---|---|---|---|---|---|---|
| 4 | Congeneration | 0.1 | NIL | NIL | NIL | NIL |

4) In the recently announced Renewable Energy Policy, Government have an ambitious target of achieving nearly 1000 MWs each year. To achieve the target of 1000 MWs a Year, Government need to have atleast 5 to 6 times that number in the pipeline. Younger and professional entrepreneurs should be encouraged to participation Renewable energy. Therefore Government has decided to reduce the processing fee of renewable Energy power projects. Hence the following Order:-

**GOVERNMENT ORDER NO: EN 61 NCE 2010, BANGALORE, DATED 06-07-2010.**

In partial modification to the Government Order No:EN 392 NCE 2008 dated: 13.10.2009, Government accords approval to reduce the processing fees of renewable energy power projects from Rs.2.00 lakhs (Rupees two lakhs) to Rs.1.00 lakh (Rupees one lakh) **with immediate effect.**

P.R.NO.1756

By Order and in the name of the Governor of Karnataka
**S.J. SAMPATH KUMAR**
Under Secretary to Government
Energy Department

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಅಧೀನ ಕಾರ್ಯದರ್ಶಿಗಳ ಕಾರ್ಯ ಹಂಚಿಕೆ ಬಗ್ಗೆ.

**ಉಲ್ಲೇಖ :** 1) ದಿನಾಂಕ 20–5–2010ರ ಟಿಪ್ಪಣಿ ಸಂಖ್ಯೆ : ಕಸಂವಾಪ್ರ 83 ಪ್ರ.ಕಾ 2010.

**2)** ದಿನಾಂಕ 28–5–2010ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 445 ಸಅಸೇ 2009.

**3)** ದಿನಾಂಕ 26–6–2010ರ ಅಧಿಸೂಚನೆ ಸಂಖ್ಯೆ : ಸಿಆಸುಇ 194 ಸಅಸೇ 2010.

**ಪ್ರಸ್ತಾವನೆ :–**

ಮೇಲೆ ಓದಲಾದ ಉಲ್ಲೇಖ (1)ರ ಟಿಪ್ಪಣಿಯಲ್ಲಿ ಪ್ರವಾಸೋದ್ಯಮ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಯವರು ಪ್ರವಾಸೋದ್ಯಮ ಮತ್ತು ವಾರ್ತಾ ಶಾಖೆಗೆ ಒಬ್ಬರೇ ಅಧೀನ ಕಾರ್ಯದರ್ಶಿ ಇದ್ದು, ಎರಡು ಶಾಖೆಗಳಿಗೆ ಪ್ರತ್ಯೇಕವಾಗಿ ಕಾರ್ಯದರ್ಶಿಗಳು ಇರುವುದರಿಂದ ವಾರ್ತಾ ಶಾಖೆಗೆ ಒಂದು ಅಧೀನ ಕಾರ್ಯದರ್ಶಿ ಹುದ್ದೆಯನ್ನು ಸೃಜಸಲು ಟಿಪ್ಪಣಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಹೆಚ್ಚುವರಿಯಾಗಿ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (3)ರ ಅಧಿಸೂಚನೆಯಲ್ಲಿ ಶ್ರೀ ಕೆ.ಸುಧಾಕರ ಶೆಟ್ಟಿ, ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ಇವರನ್ನು ಹೊಸದಾಗಿ ಸೃಜಿಸಲಾದ ಉಪ ಕಾರ್ಯದರ್ಶಿ ಹುದ್ದೆಗೆ ನೇಮಿಸಲಾಗಿದೆ.

ಪ್ರವಾಸೋದ್ಯಮ ಇಲಾಖೆಗೆ ಪ್ರತ್ಯೇಕವಾಗಿ ಪ್ರಧಾನ ಕಾರ್ಯದರ್ಶಿ ಹಾಗೂ ಉಪ ಕಾರ್ಯದರ್ಶಿ ಹುದ್ದೆಗಳಿರುವುದರಿಂದ ಪ್ರವಾಸೋದ್ಯಮ ಶಾಖೆಯ ಅಧೀನ ಕಾರ್ಯದರ್ಶಿಯವರು ಆ ಶಾಖೆಯ ಕಾರ್ಯಗಳನ್ನು ಮಾತ್ರ ನಿರ್ವಹಿಸಲು ಹಾಗೂ ಸಂಸ್ಕೃತಿ ಶಾಖೆಯ ಅಧೀನ ಕಾರ್ಯದರ್ಶಿಯವರ ಅಡಿಯಲ್ಲಿ ಒಂದೇ ಶಾಖೆ ಇರುವುದರಿಂದ ವಾರ್ತಾ ಶಾಖೆಯ ಕಾರ್ಯಗಳನ್ನು ಸಂಸ್ಕೃತಿ ಶಾಖೆಯ ಅಧೀನ ಕಾರ್ಯದರ್ಶಿಯವರು ನಿರ್ವಹಿಸಲು ತೀರ್ಮಾನಿಸಿದ್ದು. ಹಾಗೂ ಹೊಸದಾಗಿ ಸೃಜಿಸಲಾದ ಉಪ ಕಾರ್ಯದರ್ಶಿಯವರಿಗೆ ಕಾರ್ಯಹಂಚಿಕೆ ಮಾಡುವ ಸಲುವಾಗಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಅದೇಶ ಸಂಖ್ಯೆ : ಕಸಂವಾಪ್ರ 109 ಸ್ವೀಮರ 2010, ಬೆಂಗಳೂರು, ದಿನಾಂಕ : 6–7–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಉಪ ಕಾರ್ಯದರ್ಶಿಯವರಿಗೆ ಈ ಹಿಂದೆ ಹಂಚಿಕೆ ಮಾಡಲಾದ ಎಲ್ಲಾ ಶಾಖೆಗಳ ವಿಷಯಗಳಿಗೆ ಬದಲಾಗಿ ಪ್ರವಾಸೋದ್ಯಮ ಶಾಖೆಯ ವಿಷಯಗಳನ್ನು ಮಾತ್ರ ನಿರ್ವಹಿಸುವಂತೆ ಹಾಗೂ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಗೆ ಹೊಸದಾಗಿ ಸೃಜಿಸಲಾದ ಉಪ ಕಾರ್ಯದರ್ಶಿಯವರಿಗೆ ಆಡಳಿತ ಕನ್ನಡ, ವಾರ್ತಾ ಹಾಗೂ ಸಂಸ್ಕೃತಿ ಶಾಖೆಯ ವಿಷಯಗಳನ್ನು ನಿರ್ವಹಿಸುವಂತೆ ಮರುಹಂಚಿಕೆ ಮಾಡಲಾಗಿದೆ ಹಾಗೂ ಸಂಸ್ಕೃತಿ ಶಾಖೆಯ ಅಧೀನ ಕಾರ್ಯದರ್ಶಿಯವರಿಗೆ ವಾರ್ತಾ ಶಾಖೆಯ ವಿಷಯಗಳನ್ನು ನಿರ್ವಹಿಸಲು ಮರು ಕಾರ್ಯ ಹಂಚಿಕೆ ಮಾಡಲಾಗಿದೆ.

ಈ ಆದೇಶವನ್ನು ಇಲಾಖೆಯ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

ಪಿ.ಆರ್. 1757

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 2010–11ನೇ ಸಾಲಿಗೆ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :** 1) ಸರ್ಕಾರಿ ಆದೇಶ ಸಂಖ್ಯೆ : ವಿಯಇ 50 ವಿತ್ರಮ 2010, ದಿನಾಂಕ 13–4–2010

2) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಇವರ ಪತ್ರ ಸಂ. ಏಖಓಆಒಅ/ಱಾಜರಜಣ/ಂಥಿಣ/140/2010–11/170, ದಿನಾಂಕ : 18–4–2010.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರ.ಸಂ. (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2010–11ನೇ ಸಾಲಿನಲ್ಲಿ ಮುಂದುವರಿಸಿ, 2010–11ನೇ ಸಾಲಿನ ಲೆಕ್ಕಶಿರ್ಷಿಕೆ 3455–00–200–0–01 (059) (ಯೋ) ಇದರಡಿಯಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರಕ್ಕೆ ಸಹಾಯಾನುದಾನವಾಗಿ ಒಟ್ಟು ರೂ. 300.00 ಲಕ್ಷಗಳ ಅನುದಾನವನ್ನು ಆಯವ್ಯಯದಲ್ಲಿ ಕಲ್ಪಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (2) ರಲ್ಲಿನ ಪತ್ರದಲ್ಲಿ ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರು 2010–11ನೇ ಸಾಲಿನಲ್ಲಿ ಕೇಂದ್ರದ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಯ ಸಲುವಾಗಿ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಿಯಇ 1 ಬಲುಕೋ 2010, ಬೆಂಗಳೂರು, ದಿನಾಂಕ : 6–7–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2010–11ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರವು ಹಮ್ಮಿಕೊಂಡಿರುವ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಎರಡನೇ ಕಂತಿನ ಅನುದಾನವಾಗಿ ಲೆಕ್ಕಶೀರ್ಷಿಕೆ 3455–00–200–0–01 (059) (ಯೋ) ಇದರಡಿಯಲ್ಲಿ ರೂ. 75,00,000/– ಲಕ್ಷಗಳನ್ನು (ರೂ. ಎಪ್ಪತ್ತೈದು ಲಕ್ಷಗಳು ಮಾತ್ರ) ನಿರ್ದೇಶಕರು ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರಿಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಮಂಜೂರು ಮಾಡಿದೆ.

1. ಈ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 3455–00–200–0–01 (059) (ಯೋ) ಇದರಡಿಯಲ್ಲಿ ಭರಿಸತಕ್ಕದು.
2. ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರು ಸ್ವೀಕೃತ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.
3. 2010–11ನೇ ಸಾಲಿನಲ್ಲಿ ಬಿಡುಗಡೆ ಮಾಡಲಾದ ಹಣವನ್ನು ಪೂರ್ಣವಾಗಿ ಸದುಪಯೋಗಪಡಿಸಿಕೊಂಡು ಉಪಯೋಗತಾ ಪ್ರಮಾಣ ಪತ್ರವನ್ನು ಹಾಗೂ ಲೆಕ್ಕ ಪರಿಶೋಧಕರಿಂದ ದೃಢೀಕರಿಸಲ್ಪಟ್ಟ ತನಿಖಾ ವರದಿಗಳನ್ನು ದಿನಾಂಕ : 31–5–2011 ರೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4. ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು. ಮತ್ತು ಚಟುವಟಿಕೆಯ ಮಾಸಿಕ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ ಸರ್ಕಾರದ ಪೂರ್ವಾನುಮತಿ ಇಲ್ಲದೆ ವರ್ಗಾಯಿಸಬಾರದು.
5. ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಿದ ಅನುದಾನವನ್ನು ವಿನಿಯೋಗಿಸದೇ ಉಳಿಸಿಕೊಂಡಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು. ಇಲ್ಲದೆಹೋದಲ್ಲಿ ಸದರಿ ಮೊತ್ತಕ್ಕೆ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸಿಕೊಳ್ಳಲಾಗುವುದು.
6. ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನವನ್ನು ವಿನಿಯೋಗಿಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು, ಇಲ್ಲದೆಹೋದಲ್ಲಿ ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯನ್ನು ಸಂಸ್ಥೆಗೆ ಆದಾಯವೆಂದು ಪರಿಗಣಿಸಿ ಮುಂದೆ ಅನುದಾನ ಬಿಡುಗಡೆಯ ಸಂದರ್ಭದಲ್ಲಿ ಸದರಿ ಮೊತ್ತವನ್ನು ಕಡಿತಗೊಳಿಸಲಾಗುವುದು.

7. ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ : 16–5–2008 ರನ್ವಯ ಇಲಾಖಾ ಪ್ರಧಾನ ಕಾರ್ಯದರ್ಶಿರವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಬೋರಲಿಂಗಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 1758

**ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ**

**ವಿಷಯ :** ಕರ್ನಾಟಕ ರಾಜ್ಯದ ವಿವಿಧ ಪ್ರಮುಖ ಪ್ರವಾಸಿ ಕೇಂದ್ರಗಳಲ್ಲಿ ಸಿಮೆಂಟ್ ಕಾಂಕ್ರೀಟ್ ಹೆಲಿಪ್ಯಾಡ್‌ಗಳನ್ನು ನಿರ್ಮಿಸುವ ಬಗ್ಗೆ.

**ಉಲ್ಲೇಖ :** 1) ಆದೇಶ ಸಂಖ್ಯೆ : ಮೂಅಇ 110 ರಾಅವಿ 2006, ದಿನಾಂಕ 22–2–2007.
2) ಆದೇಶ ಸಂಖ್ಯೆ : ಮೂಅಇ 110 ರಾಅವಿ 2006, ದಿನಾಂಕ 4–3–2008.
3) **ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಇವರ ಪತ್ರ ಸಂಖ್ಯೆ : ಜೆ 2 ಪ್ರವಾ (ಹೆಲಿ) 2007–08 ದಿನಾಂಕ 18–1–2010, 29–3–2010 ಹಾಗೂ 22–5–2010.**

**ಪ್ರಸ್ತಾವನೆ :–**

ಮೇಲೆ ಕ್ರ.ಸಂ. 1 ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ : 22–2–2007 ರಲ್ಲಿ ರಾಜ್ಯದ ಪ್ರಮುಖ 20 ಸ್ಥಳಗಳಲ್ಲಿ ಶಾಶ್ವತ (ಸಿಮೆಂಟ್ ಕಾಂಕ್ರೀಟ್) ಹೆಲಿಪ್ಯಾಡ್‌ಗಳನ್ನು ನಿರ್ಮಿಸಲು ಅನುಮೋದನೆ ನೀಡಿ ಪ್ರತಿ ಹೆಲಿಪ್ಯಾಡ್‌ಗೆ ಗರಿಷ್ಠ ರೂ. 10.00 ಲಕ್ಷಗಳ ಬಿಡುಗಡೆಗೆ ಮಂಜೂರಾತಿ ನೀಡಿರುತ್ತದೆ. ಈ ಆದೇಶದಂತೆ ಸಂಬಂಧಿಸಿದ ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಗೆ ಬರುವ ಸ್ಥಳಗಳಲ್ಲಿ ಹೆಲಿಪ್ಯಾಡ್ ನಿರ್ಮಿಸಲು ಪ್ರತಿ ಹೆಲಿಪ್ಯಾಡ್‌ಗೆ ರೂ. 10.00 ಲಕ್ಷದಂತೆ ಹಣವನ್ನು ಪೇಯಿಸ್ ರಸೀತಿಯ ಮೂಲಕ ಪಡೆದುಕೊಂಡಿರುತ್ತಾರೆ.

2) ಉಲ್ಲೇಖ (2)ರಲ್ಲಿರುವ ದಿನಾಂಕ 4–3–2008ರ ಆದೇಶ ಸಂ. ಮೂಅಇ 110 ರಾಅವಿ 2006ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ಹೊರನಾಡಿಗೆ ಮಂಜೂರಾಗಿರುವ ಸಿಮೆಂಟ್ ಕಾಂಕ್ರೀಟ್ ಹೆಲಿಪ್ಯಾಡ್‌ಗೆ ಬದಲಾಗಿ ಕೆಮ್ಮಣ್ಣುಗುಂಡಿಯಲ್ಲಿ ಒಂದು ಹೆಲಿಪ್ಯಾಡ್ ನಿರ್ಮಿಸಲು ಅನುಮೋದನೆಯನ್ನು ನೀಡಲಾಗಿದೆ.

3) ಕ್ರಮ ಸಂ. 3ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಇವರು ಕೆಮ್ಮಣ್ಣುಗುಂಡಿಯಲ್ಲಿ ಜಾಗದಲಭ್ಯತೆ ಇಲ್ಲದ ಕಾರಣ ಕೆಮ್ಮಣ್ಣಗುಂಡಿ ಬದಲಿಗೆ ಶೃಂಗೇರಿಯಲ್ಲಿ ಹೆಲಿಪ್ಯಾಡ್ ನಿರ್ಮಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟು ಇದಕ್ಕೆ ಅನುಮತಿ ಕೋರಿರುತ್ತಾರೆ. ಶೃಂಗೇರಿಯಲ್ಲಿ ಇದಕ್ಕಾಗಿ ಸೂಕ್ತ ಸ್ಥಳ ಗುರುತಿಸಲಾಗಿದ್ದು, ಪವನ್ ಹೆಲಿಕಾಪ್ಟರ್ಸ್‌ನ ಪ್ರತಿನಿಧಿಗಳು ಸ್ಥಳದ ಆಯ್ಕೆ ಮಾಡಿರುತ್ತಾರೆಂದು ವರದಿ ಮಾಡಿರುತ್ತಾರೆ. ಸರ್ಕಾರದ ಅನುಮತಿ ನಿರೀಕ್ಷಿಸಿ ಶೃಂಗೇರಿಯಲ್ಲಿ ಹೆಲಿಪ್ಯಾಡ್ ನಿರ್ಮಿಸುವ ಅಂದಾಜು ಪಟ್ಟಿಗೆ ಅನುಮೋದನೆ ಹಾಗೂ ಆಡಳಿತ ಮಂಜೂರಾತಿ ನೀಡಿ, ಕಾಮಗಾರಿ ಪ್ರಾರಂಭಿಸಲಾಗಿದೆಯೆಂದು ತಿಳಿಸಿ, ಕೆಮ್ಮಣ್ಣು ಗುಂಡಿ ಬದಲಿಗೆ ಶೃಂಗೇರಿಯಲ್ಲಿ ಹೆಲಿಪ್ಯಾಡ್ ನಿರ್ಮಿಸಲು ಅನುಮತಿ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮೂಅಇ 110 ರಾಅವಿ 2006, ಬೆಂಗಳೂರು, ದಿನಾಂಕ : 6–7–2010**

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ನಂತರ ಕೆಮ್ಮಣ್ಣುಗುಂಡಿಗೆ ಮಂಜೂರಾಗಿರುವ ಸಿಮೆಂಟ್ ಕಾಂಕ್ರೀಟ್ ಹೆಲಿಪ್ಯಾಡ್ ಬದಲಾಗಿ ಶೃಂಗೇರಿಯಲ್ಲಿ ಹೆಲಿಪ್ಯಾಡ್ ನಿರ್ಮಿಸಲು ಅನುಮೋದನೆ ನೀಡಿದೆ.

2) ಈ ಅನುಮೋದನೆ ದಿನಾಂಕ 22–2–2007 ರ ಆದೇಶ ಸಂಖ್ಯೆ : ಮೂಅಇ 110 ರಾಅವಿ 2006 ರಲ್ಲಿನ ಷರತ್ತುಗಳಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ.ಎಸ್. ವೇಣುಗೋಪಾಲ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 1759

**PERSONNEL & ADMINISTRATIVE REFORMS SECRETARIAT**

**Sub :** Terms and Conditions of deputation of Sri Allappa R. KAS (Junior Scale) Officer as Special Land Acquisition Officer and Competent Authority, Indian Oil Corporation, Bangalore.

**Read :** 1. Govt. Notification No. DPAR 220 SKT 08, Dt. 18-11-2008.
**2.** A.G. (A & E) letter No. GE 1/R2/VOL. 727/09-10/734, dated 12-2-2010.

**GOVERNMENT ORDER NO. : DPAR 160 SKM 2010, BANGALORE, DATED : 02-06-2010**

In the Government Notification referred at (1) above, Sri Allappa, R. KAS (Junior Scale) officer was posted to Indian Oil Corporation, Bangalore as SLAO on deputation basis, Accordingly, the following terms and conditions of deputation of

Sri R. Allappa, KAS (Junior Scale) officer as Special Land Acquisition Officer and Competent Authority, Indian Oil Corporation, Bangalore are issued :

**1.** Period of Deputation : The period of deputation of Sri R. Allappa, KAS (Junior Scale) officer shall be for a period of three years or so long as service or Sri Allappa, are required in this office, whichever is earlier.

**2.** Pay : During the period of deputation, Sri R. Allappa shall draw pay of the post held by him in Indian Oil Corporation pay scale or he shall draw pay of the post held by him in his parent department. Plus deputation allowance at the rates fixed by the Government of India/Indian Oil Corporation from time to time subject to the condition that pay and foreign service allowance shall not exceed the maximum of the scale of the pay of the of KAS (Jr.Scale) post. On his return from deputation he will be eligible for the pay, which he would have drawn, had he not gone on deputation.

**3.** Dearness Allowance : The officer will be entitled to Dearness Allowance & HRA/CCA under the rules of the Indian oil Corporation if he opts for Indian Oil Corporation pay Scale or rates of State Government, if opts for State scale.

**4.** Local Allowance (i.e. H.R.A./C.C.A.) : The officer will be entitled to Local Allowance (i.e. H.R.A. & C.C.A.) under the rules of the Indian Oil Corporation.

**5.** Joining time, pay & transfer Traveling Allowance : The officer will be entitled to traveling Allowance and Joining Time both on joining the post on deputation and on reversion therefrom to the State Govenrment under the rules of the Govenrment of India, the expenditure on this account being borne by the Indian Oil Corporation.

**6.** Traveling Allowance : Traveling Allowance for journey on duty during the period of deputation will have to be regulated under the rules of Indian Oil Corporation.

**7.** Medical Concessions : The officer shall be entitled to medical concessions as admissible under the rules of the Indian Oil Corporation.

**8.** Leave and Pension : During the period of deputation he will be governed by the Leave and Pension Rules of the State Government applicable to him before such deputation.

**9.** Leave Salary and pension contribution : The payment of leave salary and pension contribution shall be regulated in accordance with the provisions of Government of India O.M. No. 14(5)/86/TA/1029, dt. 15-10-86.

**10.** Disability Leave Salary : The Indian Oil Corporation shall be liable to pay to Sri R. Allappa leave salary towards disability leave in respect of disability, if any, incurred in and through service under Government of India.

**11.** Residential accommodation : The officer will be entitled to residential accommodation according to the rules of the Indian Oil Corporation.

**12.** Leave Travel Concessions : The officer will be entitled to leave travel concessions according to the rules of the Indian Oil Corporation.

**13.** Karnataka State Employees Group Insurance Scheme, 1981 : The employer shall remit the amount of subscriptions recovered from the salary of the officer under the Scheme by a cheque or Demand Draft drawn in favour of Concerned Head of the Department/Authority with a Schedule in Annexure-A appended to the Karnataka State Employees Group Insurance Scheme Rules, 1981 for accounting the same under the relevant Head of Account.

**14.** Subscription to Insurance Policy in Karnataka Government Insurance Department/General Provident Fund : The Government servant will continue to subscribe to the Insurance Policies in Karnataka Government Insurance Department/General Provident Fund in which he was subscribing at the time of proceeding on deputation to Government of India in accordance with the Karnataka Government Insurance Department/General Provident Fund Rule. The subscription (a) shall be recovered from the salary of the officer and credited to the following Head of Account :

**"GPF 8005-Karnataka State Provident Fund**
**KGID 8011-Insurance and Pension Funds**
**Insurance Funds.**

**15.** Commencement and end of deputation : The deputation will commence on the date on which the officer hands over charge of his post under the State Government and ends on the date on which he assumes charge of a post under the Indian Oil Corporation.

**16.** Other concessions not specified : The officer shall be entitled to and receive from Indian Oil Corporation any other concessions or benefits which he would have received in the ordinary course from the State Government, but for his deputation to the Indian Oil Corporation

By Order and in the name of the Governor of Karnataka
**H.R. Nagendra**
Under Secretary to Government,
Department of Personnel & Administrative Reforms (Services-2)

P.R. 1760

